


ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – 583276


2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಡಾ. ಮಲ್ಲಿಕಾ ಘಂಟಿ ಅವರ ಬದುಕು ಹಾಗೂ ಸಾಹಿತ್ಯ


ನಿಬಂಧಕಾರರು

ಪ್ರಭುಸ್ವಾಮಿ.ಬಿ

ನೋಂದಣಿ ಸಂಖ್ಯೆ – KVTM/K 140901030090

ಕನ್ನಡ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಗಣೇಶ

ಕನ್ನಡ ಸಹಾಯಕ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಿಳಿಕೆರೆ

ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು





2014–15





ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – 583276

2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಡಾ. ಮಲ್ಲಿಕಾ ಘಂಟಿ ಅವರ ಬದುಕು ಹಾಗೂ ಸಾಹಿತ್ಯ

ನಿಬಂಧಕಾರರು

**ಪ್ರಭುಸ್ವಾಮಿ.ಬಿ**

ನೋಂದಣಿ ಸಂಖ್ಯೆ – KVTM/K 140901030090

ಕನ್ನಡ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಗಣೇಶ**

ಕನ್ನಡ ಸಹಾಯಕ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಿಳಿಕೆರೆ

ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

2014–15

# ಅಭ್ಯರ್ಥಿಯ ಘೋಷಣಾ ಪತ್ರ

**"ಡಾ. ಮಲ್ಲಿಕಾ ಘಂಟಿ ಅವರ ಬದುಕು ಹಾಗೂ ಸಾಹಿತ್ಯ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ: KVTM/K 140901030090ರ ವಿದ್ಯಾರ್ಥಿಯಾದ ನಾನು ೨೦೧೪-೧೫ನೆಯ ಸಾಲಿನ ಪರೀಕ್ಷೆಗಾಗಿ **ಡಾ. ಗಣೇಶ, ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಿಳಿಕೆರೆ** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ: ೧೫-೦೭-೨೦೧೫

(ಪ್ರಭುಸ್ವಾಮಿ.ಬಿ)
೨೦೧೪-೧೫ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಮಾರ್ಗದರ್ಶಕರ ಪ್ರಮಾಣಪತ್ರ

೨೦೧೪-೧೫ನೆಯ ಸಾಲಿನಲ್ಲಿ ಕ್ರಮ ಸಂಖ್ಯೆ: KVTM/K 140901030090ರ ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಪ್ರಭುಸ್ವಾಮಿ.ಬಿ** ಅವರು ನನ್ನ ಮಾರ್ಗದರ್ಶನದಲ್ಲಿ **"ಡಾ. ಮಲ್ಲಿಕಾ ಘಂಟಿ ಅವರ ಬದುಕು ಹಾಗೂ ಸಾಹಿತ್ಯ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಳಿಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಗಣೇಶ

**(ಡಾ. ಗಣೇಶ)**
**ಕನ್ನಡ ಸಹಾಯಕ ಪ್ರಾಧ್ಯಾಪಕರು**
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಬಿಳಿಕೆರೆ, ಹುಣಸೂರು ತಾಲ್ಲೂಕು
ಮೈಸೂರು ಜಿಲ್ಲೆ

ಸ್ಥಳ : ಮೈಸೂರು
ದಿನಾಂಕ: ೧೫-೦೭-೨೦೧೫

# ವಿಷಯಸೂಚಿ

## ಡಾ. ಮಲ್ಲಿಕಾ ಘಂಟಿ ಅವರ ಬದುಕು ಹಾಗೂ ಸಾಹಿತ್ಯ



* * * * *

## ಅಧ್ಯಾಯ ಒಂದು

# ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ

ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಒಂದು ಅಪೂರ್ವ ಸ್ಥಾನವನ್ನು ಅಲಂಕರಿಸಿದೆ. ಇದು ವಿವಿಧ ಭಾಷಾ ಸಾಹಿತ್ಯಕ್ಕೆ ಮಾದರಿಯಾಗಿದೆ. ಪ್ರಾಚೀನ ಕಾಲದಿಂದ ಈ ಹೊತ್ತಿನವರೆಗೆ ತನ್ನದೇ ಆದ ವಿಶಿಷ್ಟ ಆಯಾಮಗಳಲ್ಲಿ ಈ ಸಾಹಿತ್ಯ ತೆರೆದುಕೊಂಡು ವಿಕಾಸ ಹೊಂದಿದೆ. ಜೀವಪರವಾದ ಮೌಲ್ಯಗಳನ್ನು ವೈಜ್ಞಾನಿಕ ಹಾಗೂ ವೈಚಾರಿಕ ಪ್ರಜ್ಞೆಯ ನೆಲೆಯಲ್ಲಿ ತಿಳಿಸುತ್ತಾ ಬಂದಿದೆ. ಕನ್ನಡ ಸಾಹಿತ್ಯಕ್ಕೆ ಪಂಪ, ಬಸವ, ಹರಿಹರ, ಕುಮಾರವ್ಯಾಸ, ಕನಕದಾಸ ಇವರುಗಳ ಕೊಡುಗೆ ಅಪಾರ ಮತ್ತು ವಿಶೇಷವಾದುದು. ಇವರು ಕನ್ನಡ ಸಾಹಿತ್ಯಕ್ಕೆ ವಿಶೇಷ ಮೆರುಗನ್ನು ತಂದುಕೊಟ್ಟವರಲ್ಲಿ ಪ್ರಮುಖರು.

ಕನ್ನಡ ಸಾಹಿತ್ಯದ ಇತಿಹಾಸವನ್ನು ಅಧ್ಯಯನ ಮಾಡುವಾಗ ಮಹಿಳೆ ಮಾತನಾಡಿದ್ದು ಕಡಿಮೆ ಹಾಗೂ ಸ್ವತಃ ಮಹಿಳೆಯೇ ಸಾಹಿತ್ಯ ರಚನೆ ಮಾಡಿದ್ದು ಬಹಳ ವಿರಳ. ಇದಕ್ಕೆ ೧೨ನೇ ಶತಮಾನದ ವಚನಕಾರ್ತಿಯರು ಹಾಗೂ ಆಧುನಿಕ ಕನ್ನಡ ಸಾಹಿತ್ಯ ಹೊರತಾದ ನಿದರ್ಶನವಾಗಿದೆ. ಆದರೆ ೧೨ನೇ ಶತಮಾನದ ಶರಣರ ಆಂದೋಲನದ ನಂತರ ಮಹಿಳೆ ನೇಪಥ್ಯಕ್ಕೆ ಸರಿದು ಮತ್ತೆ ಆಕೆ ಕಾಣಿಸಿಕೊಳ್ಳಲು ಆರು ಶತಮಾನಗಳೇ ಬೇಕಾಯಿತು. "ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವಿರಿ"[೧] ಎಂಬ ಹೊನ್ನಮ್ಮನ ಒಂದು ಕ್ಷೀಣ ಸ್ವರವನ್ನು ಬಿಟ್ಟರೆ ೨೦ನೇ ಶತಮಾನದವರೆಗಿನ ಅವಧಿಯಲ್ಲಿ ಮಹಿಳೆಯ ಗಟ್ಟಿ ಧ್ವನಿ ಕೇಳಿಸಲೇ ಇಲ್ಲ.

ವಸಾಹತುಶಾಹಿ ಶಿಕ್ಷಣದ ಪ್ರಭಾವದಿಂದ ಭಾರತದಲ್ಲಿ ಮಹಿಳೆಯ ದೃಷ್ಟಿಕೋನ ಗಟ್ಟಿಗೊಳ್ಳತೊಡಗಿತು. ಸ್ತ್ರೀ ವಿಮೋಚನಾ ಚಳವಳಿಯಿಂದಾಗಿ ಮಹಿಳೆಗೆ ಶಿಕ್ಷಣ ಸೌಲಭ್ಯ ದೊರಕಿ ಸ್ವತಂತ್ರವಾಗಿ ಆಲೋಚನೆ ರೂಢಿಸಿಕೊಳ್ಳಲು ಸಾಧ್ಯವಾಯಿತು. ಕಳೆದ ಎರಡು–ಮೂರು ದಶಕಗಳಿಂದ ಮಹಿಳಾ ಸಾಹಿತ್ಯ ಸ್ತ್ರೀವಾದಿ ಚಿಂತನೆಗಳಿಗೆ ಸ್ಪಂದಿಸುತ್ತಾ ಸಶಕ್ತವಾಗಿ ಮೂಡಿಬರುತ್ತಿದ್ದು, ಪ್ರಜ್ಞಾವಂತ ಮಹಿಳೆಯ ಎತ್ತರದ ಧ್ವನಿ ಕೇಳಿಬರುತ್ತಿದೆ. ಇಂದು ಸ್ತ್ರೀ ತನ್ನ ಅಸ್ಮಿತೆಯನ್ನು ಭದ್ರಪಡಿಸಿಕೊಳ್ಳುತ್ತಿದ್ದಾಳೆ. ಹೆಣ್ಣು ಅಬಲೆಯಲ್ಲ ಸಂಪೂರ್ಣ ಸಬಲೆ ಎಂಬ

ಗ್ರಹಿಕೆಯನ್ನು ಸಾಹಿತ್ಯದಲ್ಲಿ ಮೂಡಿಸುತ್ತಿದ್ದಾಳೆ. ಇಂದಿನ ದಿನಗಳಲ್ಲಿ ಸ್ತ್ರೀವಾದಿ ಚಿಂತನೆಯೇ ತನ್ನ ಅನನ್ಯ ಅಸ್ಮಿತೆಗಾಗಿ ಹೋರಾಟ ಮಾಡುತ್ತಿದೆ.

೨೦ನೇ ಶತಮಾನದ ಆರಂಭದ ದಶಕದಲ್ಲಿ ನಂಜನಗೂಡಿನ ತಿರುಮಲಾಂಬ, ಆರ್.ಕಲ್ಯಾಣಮ್ಮ, ತಿರುಮಲೈ ರಾಜಮ್ಮ, ಎಂ.ಕೆ.ಇಂದಿರಾ, ತ್ರಿವೇಣಿ, ಜಯದೇವಿತಾಯಿ ಲಿಗಾಡೆ ಮೊದಲಾದವರು ತಮ್ಮ ಅನನ್ಯತೆಯನ್ನು ಅನಾವರಣಗೊಳಿಸಿದರು. ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಯು ಎಪ್ಪತ್ತು-ಎಂಬತ್ತರ ದಶಕದಲ್ಲಿ ಕಾಣಿಸಿ ಕೊಳ್ಳಲಾರಂಭಿಸಿತು. ಅಲ್ಲಿಂದ ಅದು ಜೀವಮುಖಿಯಾಗಿ, ಸಮಾಜಮುಖಿಯಾಗಿ, ಮಾನವೀಯ ನೆಲೆಯಲ್ಲಿ, ವೈಚಾರಿಕ ಪ್ರಜ್ಞೆಯನ್ನೊಳಗೊಂಡು ಇಂದು ಹಲವು ಬರಹಗಾರ್ತಿಯರ ಮೂಲಕ ಪ್ರಚಲಿತವಾಗಿದೆ. ಎಂಬತ್ತರ ದಶಕದಿಂದೀಚೆಗೆ ಶೈಲಜಾ ಉಡಚಣ, ಮಾಲತಿ ಪಟ್ಟಣಶೆಟ್ಟಿ, ಎನ್.ವಿ.ಭಾಗ್ಯಲಕ್ಷ್ಮೀ, ಕಮಲ ಹೆಮ್ಮಿಗೆ, ಪ್ರತಿಭಾ ನಂದಕುಮಾರ್, ಚ.ಸರ್ವಮಂಗಳಾ ಮೊದಲಾದ ಸ್ತ್ರೀವಾದಿ ಚಿಂತಕಿಯರು ಬೆಳಕಿಗೆ ಬಂದರು. ಪ್ರಸ್ತುತ ವಿಜಯಾ ದಬ್ಬೆ, ಬಿ.ಎನ್.ಸುಮಿತ್ರಾಬಾಯಿ, ಕಮಲಾ ಹಂಪನಾ, ಮಲ್ಲಿಕಾ ಘಂಟಿ, ಸವಿತಾ ನಾಗಭೂಷಣ, ಗೀತಾ ನಾಗಭೂಷಣ ಮುಂತಾದವರು ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಬಹುರೂಪಿಯಾಗಿ ತಮ್ಮ ಸ್ತ್ರೀ ಅಸ್ಮಿತೆಯನ್ನು ಛಾಪಿಸುತ್ತಿದ್ದಾರೆ.

ಕನ್ನಡ ಸಾಹಿತ್ಯದ ವಿವಿಧ ಸಾಹಿತ್ಯಕ ಚಳವಳಿಗಳಲ್ಲಿಯೇ ಬಹಳ ವಿಶೇಷವಾದ ಸ್ಥಾನವನ್ನು ದಲಿತ-ಬಂಡಾಯ ಸಾಹಿತ್ಯ ಪಡೆದುಕೊಂಡಿದೆ. ಈ ದಲಿತ ಬಂಡಾಯ ಸಾಹಿತ್ಯ ಇಂದು ಕಾವ್ಯ, ಕತೆ, ಕಾದಂಬರಿ, ನಾಟಕ ಮುಂತಾದ ವಿವಿಧ ಆಯಾಮಗಳಲ್ಲಿ ಬೆಳೆದುನಿಂತಿದೆ. ಈ ವಿಶಿಷ್ಟವಾದ ಸಾಹಿತ್ಯದಲ್ಲಿ ಸ್ತ್ರೀಯ ಬದುಕಿನಲ್ಲಿ ಆದ ಬದಲಾವಣೆಗಳನ್ನು ಗುರ್ತಿಸುವ ಸನ್ನಿವೇಶದಲ್ಲಿ 'ಬದಲಾವಣೆ' ಎಂದರೇನು? ಎಂಬುದನ್ನು ಸ್ಪಷ್ಟ ಪಡಿಸಿಕೊಳ್ಳಬೇಕಾಗಿದೆ. ಈ ಹೊತ್ತಿನ ವ್ಯವಸ್ಥೆ ಪಲ್ಲಟ ಹಾಗೂ ಸಮಾಜೋ-ಆರ್ಥಿಕ ಸಮಾನತೆಯಿಂದ ಉಭಯಲಿಂಗ ಪ್ರಧಾನ, ಮನುಷ್ಯ-ಮನುಷ್ಯನನ್ನು ಗೌರವಿಸುವ, ಪ್ರೀತಿಸುವ, ಆದರದಿಂದ ಕಾಣುವ ಮೌಲ್ಯಗಳು ಪರ್ಯಾಯ ಸಮಾಜವನ್ನು ನಿರ್ಮಿಸುವುದು, ದಲಿತ-ಬಂಡಾಯ ಸಾಹಿತ್ಯ ಚಳವಳಿಯ ಆಶಯ. ಈ ಸಂದರ್ಭದಲ್ಲಿ ಬಂದಿರುವ ಸಾಹಿತ್ಯದಲ್ಲಿ ಅಸಹಾಯಕರ ಪರವಾದ, ಪ್ರತಿಭಟನೆ ಹಾಗೂ ಸಮಾಜ ಬದಲಾವಣೆಯ ಆಶಯಗಳ ಹಿನ್ನಲೆಯಲ್ಲಿ ಸ್ತ್ರೀ ಬದುಕನ್ನು ಕುರಿತ ಆಲೋಚನೆಗಳು ನಡೆದಿವೆ.

ಹೆಣ್ಣನ್ನು ಮನುಷ್ಯಳೆಂದು ಈ ಸಮಾಜ ಪರಿಗಣಿಸದೆ ಇದ್ದಿದ್ದರಿಂದ ಹೋರಾಟದ ಹಾದಿಯ ಮೂಲಕ ಅವಳು ತನ್ನ ಹೆಜ್ಜೆ ಗುರುತುಗಳನ್ನು ದಾಖಲಿಸುತ್ತಿದ್ದಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯ ಶೋಷಣೆ ಅತ್ಯಂತ ಪ್ರಾಚೀನವಾದುದು. ಆದರೆ ಇತ್ತೀಚೆಗೆ ಕೆಲವೊಮ್ಮೆ ತನಗಾದ ಅನ್ಯಾಯವನ್ನು ಆಕೆ ಹೇಳಿಕೊಂಡಿದ್ದಾಳೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿನ ಕ್ರೌರ್ಯಕ್ಕೆ ಬಲಿಯಾದವರು ಅಸಂಖ್ಯರು. ಅಂಥವರು ಆರಂಭದಲ್ಲಿ ನೇರವಾಗಿ ಪ್ರತಿಭಟನೆ ಮಾಡದೆ, ಸಂಘರ್ಷಕ್ಕೂ ಇಳಿಯದೆ ಹೋಗಿದ್ದರಿಂದ ಅವರ ಅಂತರಾತ್ಮದ ನೋವು, ಆಕ್ರೋಶ, ಅಸಹಾಯಕತೆ, ವ್ಯರ್ಥವಾಗಿ ಹೋದವು. ಹೆಣ್ಣು ಇಂದು ವೈಚಾರಿಕ ನೆಲೆಯಲ್ಲಿ ಚಿಂತಿಸುತ್ತಿದ್ದಾಳೆ. ಇಂತಹ ಮಹಿಳೆಯರು ಹೋರಾಟಗಾರರಾಗಿ, ಸ್ತ್ರೀವಾದಿಗಳಾಗಿ ನಮ್ಮ ನಡುವೆ ಕಾಣಿಸಿಕೊಳ್ಳುತ್ತಿದ್ದಾರೆ.

ಇಂತಹ ವೈಚಾರಿಕ ಚಿಂತನೆಯ ಮೂಲಕ ಎಪ್ಪತ್ತರ ದಶಕದಲ್ಲಿ ಹೋರಾಟದ ಉತ್ಪನ್ನವಾಗಿ ಹೊರಹೊಮ್ಮಿದವರು ಮಲ್ಲಿಕಾ ಘಂಟಿಯವರು. ಈ ದಶಕದ ಚಳುವಳಿಗಳು ಸಮಾಜಮುಖಿಯಾದಂತಹವು. ಈ ಚಳವಳಿಯ ಕಾವಿನ ಹಿನ್ನೆಲೆಯಿಂದ ಬಂದ ಮಲ್ಲಿಕಾ ಘಂಟಿಯವರಿಗೆ ಆ ಹೊತ್ತಿನ ಚಳವಳಿ, ಅದರಲ್ಲಿದ್ದ ನ್ಯಾಯಪರ ಹೋರಾಟ ಒಂದು ವಿಭಿನ್ನ ವ್ಯಕ್ತಿತ್ವವನ್ನು ನೀಡಿದವು. ಅಲ್ಲದೆ ಸಾಧಕ ಮಹಿಳೆಯ ಸ್ಥಾನಮಾನವನ್ನು ತಂದುಕೊಟ್ಟವು. ಈ ಹೋರಾಟಗಳಿಂದ ಬಹುದೊಡ್ಡ ವ್ಯಕ್ತಿತ್ವವಾಗಿ ರೂಪುಗೊಂಡ ಮಲ್ಲಿಕಾ ಘಂಟಿಯವರಿಗೆ ಈ ಹೋರಾಟ, ಚಳವಳಿಗಳೇ ಇವರ ಸಾಹಿತ್ಯ ಕೃಷಿಗೆ ಪ್ರೇರಣೆಯನ್ನು ಸ್ಫೂರ್ತಿಯನ್ನು ನೀಡಿದವು.

ಇಪ್ಪತ್ತನೆಯ ಶತಮಾನದ ಕೊನೆಯಲ್ಲಿ ಮಲ್ಲಿಕಾ ಘಂಟಿಯವರ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಕೃಷಿ ಅನನ್ಯವಾದುದು. "ಮಲ್ಲಿಕಾ ಘಂಟಿಯವರು ಈ ಸಮಾಜದಲ್ಲಿ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಅತ್ಯಂತ ಹಿಂದುಳಿದ ಜನಸಮೂಹದಿಂದ ಬೆಳೆದು ಬಂದ ಗಟ್ಟಿಗಿತ್ತಿ. ಸ್ತ್ರೀ ಪರ ಕಾಳಜಿಯನ್ನುಳ್ಳ ಇವರು ಕಾವ್ಯ, ನಾಟಕ, ಜೀವನಚರಿತ್ರೆ, ವಿಮರ್ಶೆ, ಸಂಪಾದನೆ ಹೀಗೆ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸಿದ್ದಾರೆ. ಮಲ್ಲಿಕಾರವರು ವಾಸ್ತವವಾದಿ ಚಿಂತನೆಯನ್ನಿಟ್ಟುಕೊಂಡು ಪರ್ಯಾಯ ಸಮಾಜ ನಿರ್ಮಾಣದ ಕನಸನ್ನು ಇಟ್ಟುಕೊಂಡಿರುವಂಥವರು. ಇವರ ವ್ಯಕ್ತಿತ್ವ ಹಾಗೂ ಸಾಹಿತ್ಯದ ವಿಭಿನ್ನ ಆಯಾಮಗಳನ್ನು ದೃಷ್ಟಿಕೋನಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಈ ನಿಬಂಧದ ಉದ್ದೇಶವಾಗಿದೆ.

ಮಲ್ಲಿಕಾಘಂಟಿಯವರು ಈವರೆಗೆ ಪ್ರಕಟಿಸಿರುವ 'ತುಳಿಯದಿರಿ ನನ್ನ' (೧೯೮೬) 'ರೊಟ್ಟಿ ಮತ್ತು ಹುಡುಗಿ' (೧೯೯೯), 'ಈ ಹೆಣ್ಣುಗಳೇ ಹೀಗೆ' (೧೯೮೯), 'ಬೆಲ್ಲದಚ್ಚು ಮತ್ತು ಇರುವೆ ದಂಡು' (೨೦೦೫), ಚಾಜ (ನಾಟಕ ) (೧೯೯೦), 'ಅಹಲ್ಯಾಬಾಯಿ ಹೋಳ್ಕರ್' (೧೯೯೪), 'ಧರಣೀಯ ಮೇಲೊಂದು' (೨೦೦೫), 'ತನು ಕರಗದವರಲ್ಲಿ' (೨೦೦೪), 'ಕನ್ನಡಸಾಹಿತ್ಯ ಮತ್ತು ಮಹಿಳೆ' (೨೦೦೬), 'ಕನ್ನಡದಲ್ಲಿ ಕತೆಗಾರ್ತಿಯರು' (೨೦೦೦) ಈ ಎಲ್ಲಾ ಕೃತಿಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ. ಲೇಖಕರ ಸ್ತ್ರೀ ಬದುಕಿನ ಅಸ್ಮಿತೆ ಕುರಿತ ಮಹಿಳೆಯ ಮಾನಸಿಕ ಒಳತೋಟಿ, ಸ್ತ್ರೀ ಸಂವೇದನೆಯನ್ನು ಕುರಿತು ಮಲ್ಲಿಕಾ ಘಂಟಿಯವರ ಕಾವ್ಯ, ನಾಟಕ, ವಿಮರ್ಶಾ ಸಂಕಲನ, ಸಂಪಾದಿತ ಕೃತಿಗಳು ಹಾಗೂ ಆ ಕೃತಿಗಳಲ್ಲಿನ ವೈಶಿಷ್ಟ್ಯವನ್ನು ಕುರಿತು ವ್ಯಾಸಂಗ ಮಾಡುವುದು ಇಲ್ಲಿನ ಅಧ್ಯಯನ ಉದ್ದೇಶವಾಗಿದೆ.

"ಡಾ. ಮಲ್ಲಿಕಾ ಘಂಟಿಯವರ ಬದುಕು ಹಾಗೂ ಸಾಹಿತ್ಯ" ಪ್ರಸ್ತುತ ನಿಬಂಧದ ಶೀರ್ಷಿಕೆಯಾಗಿದೆ. ಈ ವಿಷಯವನ್ನು ಬಹು ಆಯಾಮಗಳಲ್ಲಿ ವಿಶ್ಲೇಷಿಸುವ ದೃಷ್ಟಿಯಿಂದ ಒಟ್ಟು ಆರು ಪ್ರಮುಖವಾದ ಅಧ್ಯಾಯಗಳನ್ನಾಗಿ ವಿಭಾಗಿಸಿಕೊಂಡು ಸಂಶೋಧನೆ ನಡೆಸಲಾಗಿದೆ. ಅವುಗಳೆಂದರೆ:

- ಅಧ್ಯಾಯ–ಒಂದು
  **ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ**
- ಅಧ್ಯಾಯ–ಎರಡು
  **ಮಲ್ಲಿಕಾ ಘಂಟಿ ಅವರ ಬದುಕಿನ ಹಿನ್ನೋಟ : ಪರಿಚಯ**
- ಅಧ್ಯಾಯ–ಮೂರು
  **ಬಂಡಾಯ ಚಿಂತನೆಯ ಪ್ರಾತಿನಿಧಿಕ ರೂಪವಾದ ಕಾವ್ಯ–ನಾಟಕಗಳ ಅಧ್ಯಯನ**
- ಅಧ್ಯಾಯ–ನಾಲ್ಕು
  **ಜೀವನ ಚರಿತ್ರೆಗಳ ಅಧ್ಯಯನ**
- ಅಧ್ಯಾಯ–ಐದು
  **ವಿಮರ್ಶೆ/ಸಂಪಾದನ ಬರಹಗಳು ಹಾಗೂ**
  **ಸಾಮಾಜಿಕ ಸಂಶೋಧನೆ ಕುರಿತ ಅಧ್ಯಯನ**
- ಅಧ್ಯಾಯ–ಆರು

  **ಸಮಾರೋಪ**

**ಅನುಬಂಧಗಳು**

ಈ ರೀತಿಯಾಗಿ ಒಟ್ಟು ಆರು ಅಧ್ಯಾಯಗಳಲ್ಲಿ ಪ್ರಸ್ತುತ ಅಧ್ಯಾಯವನ್ನು ಕೈಗೊಳ್ಳಲಾಗಿದೆ.

ಈ ನಿಬಂಧದ ಕೊನೆಯಲ್ಲಿರುವ ಅನುಬಂಧವು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿರುವ ಪ್ರಧಾನ ಮತ್ತು ಪೂರಕ ಆಕರಗಳ ಸೂಚಿಯನ್ನು ಒಳಗೊಂಡಿದೆ. ಜೊತೆಗೆ ಪ್ರಬಂಧದ ರಚನೆಯ ಸಂದರ್ಭದಲ್ಲಿ ಪರಾಮರ್ಶಿಸಿದ ಪ್ರಮುಖ ಗ್ರಂಥಗಳು, ಲೇಖನಗಳು, ಸಂಶೋಧನಾ ಪ್ರಬಂಧಗಳು, ಪತ್ರಿಕೆಗಳು ಹಾಗೂ ಛಾಯಾಚಿತ್ರಗಳನ್ನು ಅನುಕ್ರಮದಲ್ಲಿ ಜೋಡಿಸಿದೆ. ಅಲ್ಲದೆ ಮಲ್ಲಿಕಾ ಘಂಟಿಯವರ ಬದುಕಿನ ಹೆಜ್ಜೆ ಗುರುತುಗಳು ಮತ್ತು ಲೇಖಕರ ಸಂದರ್ಶನ, ವಿವಿಧ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ನೀಡಿದೆ.

**ಅಧ್ಯಾಯ-೧**

**ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ**

ಪ್ರಸ್ತುತ ನಿಬಂಧದ ಮೊದಲನೆಯ ಅಧ್ಯಾಯವು ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶವನ್ನು ಕುರಿತದ್ದಾಗಿದೆ. ಇದರಲ್ಲಿ ಕನ್ನಡ ಸಾಹಿತ್ಯ, ಮಹಿಳಾ ಸಾಹಿತ್ಯದ ಹಿನ್ನೋಟ ದಲಿತ-ಬಂಡಾಯದ ಸಾಹಿತ್ಯದಲ್ಲಿ ಮಹಿಳೆ ಬೆಳೆದು ಬಂದ ಬಗೆ, ಮಹಿಳಾ ಸಾಹಿತ್ಯ ಇವುಗಳ ಸ್ಥೂಲ ನೋಟವಿದೆ. ಅವುಗಳ ಹಿನ್ನೆಲೆಯಲ್ಲಿ ಮಲ್ಲಿಕಾ ಘಂಟಿಯವರ ಬದುಕು-ಬರಹ ಕುರಿತ ಅಧ್ಯಯನವನ್ನು ಮಾಡಲಾಗುತ್ತದೆ.

**ಅಧ್ಯಾಯ-೨**

**ಮಲ್ಲಿಕಾಘಂಟಿ ಅವರ ಬದುಕಿನ ಹಿನ್ನೋಟ : ಪರಿಚಯ**

ಈ ಅಧ್ಯಾಯವು ಮಲ್ಲಿಕಾ ಘಂಟಿ ಅವರ ಜೀವನ-ಸಾಧನೆಯನ್ನು ಪರಿಚಯಿಸುವ ಉದ್ದೇಶವುಳ್ಳದ್ದಾಗಿದೆ. ಜನನ, ತಂದೆ, ತಾಯಿ, ವಿದ್ಯಾಭ್ಯಾಸ, ಬಾಲ್ಯದ ನೆನಪುಗಳು, ಪ್ರಾಧ್ಯಾಪಕಿಯಾಗಿ ವೃತ್ತಿ ಆರಂಭ, ಅನುಭವ, ಹೋರಾಟಗಾರ್ತಿಯಾಗಿ ಸಾಹಿತ್ಯದ ವಿಭಿನ್ನ ಆಯಾಮಗಳಲ್ಲಿ ಕರ್ತವ್ಯ ನಿರ್ವಹಿಸಿದ ಬಗೆ, ಈಗ ಕರ್ತವ್ಯ ನಿರ್ವಹಿಸುತ್ತಿರುವ ವಿಶ್ವವಿದ್ಯಾಲಯದ ಕುಲಸಚಿವ ಹುದ್ದೆಯ ಜವಾಬ್ದಾರಿಯುತ ಕಾರ್ಯಗಳು, ಪ್ರಗತಿಶೀಲ ಕುಲಸಚಿವರಾಗಿ ಕಾರ್ಯಕ್ಷೇತ್ರ ವಿವರ, ಮಧ್ಯಮ ವರ್ಗದ ಭ್ರಾಮಕ ಜೀವನದಿಂದ ಹೊರಬಂದು ಬೆಳೆದು ನಿಂತ ಬಗೆ, ಕುಟುಂಬದ ಜೊತೆ ಕಳೆದ ಕ್ಷಣಗಳು ಈ ಎಲ್ಲಾ ಅಂಶಗಳ ಕುರಿತ ಅಧ್ಯಯನ ಪ್ರಸ್ತುತ ಅಧ್ಯಾಯದ್ದಾಗಿದೆ.

ಅಧ್ಯಾಯ-೩

## ಬಂಡಾಯ ಚಿಂತನೆಯ ಪ್ರಾತಿನಿಧಿಕ ರೂಪವಾದ ಕಾವ್ಯ-ನಾಟಕಗಳ ಅಧ್ಯಯನ

ಮಲ್ಲಿಕಾ ಘಂಟಿಯವರ ಸೃಜನಶೀಲ ಕೃತಿಗಳಲ್ಲಿನ ಬಂಡಾಯದ ಧೋರಣೆ ಯನ್ನು ಗುರ್ತಿಸುವುದು ಈ ಅಧ್ಯಾಯದ ಗುರಿಯಾಗಿದೆ. ಇವರ ಚೊಚ್ಚಲ ಕೃತಿಯಾದ 'ತುಳಿಯದಿರಿ ನನ್ನ' ಕವನ ಸಂಕಲನದಲ್ಲಿ ಸಂಪ್ರದಾಯ ವ್ಯವಸ್ಥೆಯನ್ನು ವಿರೋಧಿಸುವ ನಿಲುವು, 'ರೊಟ್ಟಿ ಮತ್ತು ಹುಡುಗಿ' ಸಂಕಲನದಲ್ಲಿನ ಹಸಿವು ಮತ್ತು ಪ್ರೀತಿಯ ಅನಿವಾರ್ಯತೆಯಲ್ಲಿ ಹೆಣ್ಣಿಗೆ ಪ್ರೀತಿಯೇ ನಿರಂತರ ಹಸಿವಾಗಿ ಕಾಡುವ ಅಂಶಗಳು, 'ಬೆಲ್ಲದಚ್ಚು ಮತ್ತು ಇರುವೆ ದಂಡು' ಕಾವ್ಯಕೃತಿಯಲ್ಲಿನ 'ಹೊಸವರುಷ', 'ಅರಿವು' ಮತ್ತು ನಿವೇದನೆಯಂಥ ಕವಿತೆಗಳ ವಿಸ್ಮಯ-ಕಾವ್ಯದ ಪರಿಧಿಯಲ್ಲಿ ಅದು ಹಿಗ್ಗಿರುವ ಬಗೆ, ರಾಜಕೀಯ, ದೇಶಪ್ರೇಮ, ಸಾಮಾಜಿಕ ನ್ಯಾಯ ಇಂತಹ ವಸ್ತುಗಳನ್ನು ಸಮರ್ಥವಾಗಿ ಅಭಿವ್ಯಕ್ತಪಡಿಸಿದ ರೀತಿಯನ್ನೂ ಅದರಲ್ಲಿ ಕಾಣಿಸುವ ಸಮಾಜಮುಖಿ ಧೋರಣೆಯನ್ನೂ ಗುರ್ತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಜೊತೆಗೆ, ಹೆಣ್ಣು ಶೋಷಣೆಗೆ ಒಳಗಾಗಿ ಆಕೆ ಅನುಭವಿಸಿದ ಹಾಗೂ ಅನುಭವಿಸುತ್ತಿರುವ ಯಾತನೆ, ಅಸಹಾಯಕತೆ, ಆಕ್ರೋಶಗಳನ್ನು ಎದುರಿಸಿದ ಬಗೆಯನ್ನು ಮಲ್ಲಿಕಾ ಘಂಟಿಯವರ ಸೃಜನಶೀಲ ಕೃತಿಗಳಲ್ಲಿ ಗುರುತಿಸಿ ಕೂಲಂಕಷವಾಗಿ ಅಧ್ಯಯನ ಮಾಡುವುದು ಈ ಅಧ್ಯಾಯದ ಉದ್ದೇಶವಾಗಿದೆ.

ಅಧ್ಯಾಯ-೪

## ಜೀವನಚರಿತ್ರೆಗಳ ಅಧ್ಯಯನ

ನಮ್ಮ ಭಾರತೀಯ ಪುರುಷ ಪ್ರಧಾನ ಸಮಾಜದಲ್ಲಿ ಸಾಧಕ ಸ್ತ್ರೀಯರ ಸಂಖ್ಯೆ ಒಂದು ಪುಟ್ಟ ಮೊತ್ತ. ಕೈ ಬೆರಳೆಣಿಕೆಯಷ್ಟು ನಿಲ್ಲುವ ಪ್ರಾತಃಸ್ಮರಣೀಯ ವೀರಮಹಿಳೆಯರು ಬರೀ ಕೀರ್ತಿವಂತರಲ್ಲ, ಸ್ಫೂರ್ತಿದಾಯಿನಿಯರಾಗಿದ್ದರು. "ಪ್ರಸಿದ್ಧ ಪುರುಷನ ಹಿಂದೆ ಒಬ್ಬ ಮಹಿಳೆಯಿರುತ್ತಾಳೆ" ಎನ್ನುವ ಮಾತು, ಹತ್ತಿಕ್ಕಲ್ಪಟ್ಟ ಸ್ತ್ರೀಯನ್ನು ಸಮಾಧಾನ ಪಡಿಸುವ ಹಿತಾಸಕ್ತಿಯಿಂದ ಕೂಡಿದ್ದು, ಪ್ರಸಿದ್ಧ ಪುರುಷರಿಗೆ ಒತ್ತಾಸೆಯಾಗಿರುವ ಮಹಿಳೆಯರ ಮೇಲೆ ಬೆಳಕು ಚೆಲ್ಲಿದರೆ ಪುಟ್ಟಮೊತ್ತ ದೊಡ್ಡ ಮೊತ್ತವಾದೀತು. ನಮ್ಮ ಇತಿಹಾಸದಲ್ಲಿ ವೀರಪುರುಷರಿಗೆ ಶ್ರೇಷ್ಠ ವ್ಯಕ್ತಿಗಳಿಗೆ ಜನ್ಮ ಕೊಟ್ಟವರು ಕೆಲವು ಮಹಿಳೆಯರಾದರೆ ಸ್ವತಃ ಖಡ್ಗ

ಹಿಡಿದು ಯುದ್ಧಭೂಮಿಯಲ್ಲಿದ್ದು ಬಂದವರು ಹಲವರು. ಇನ್ನೂ ಕೆಲವರು ಕೆಲವು ಪ್ರಸಿದ್ಧ ಮಹಿಳೆಯರು ರಾಜ್ಯವಾಳಿದವರಿದ್ದಾರೆ. ಇನ್ನೂ ಕೆಲವರು ಪ್ರೇರಕ ಶಕ್ತಿಯಾಗಿದ್ದು ಪುರುಷ ಕಿರೀಟಕ್ಕೆ ಯಶದ ಗರಿ ಚುಚ್ಚಿದವರಿದ್ದಾರೆ.

ಈ ಅಧ್ಯಾಯದಲ್ಲಿ 'ಅಹಲ್ಯಾಬಾಯಿ ಹೋಳ್ಕರ್' ಎಂಬ ಅಜ್ಞಾತ ಮಹಿಳೆಯ ಬದುಕನ್ನು ಕುರಿತ ಐತಿಹಾಸಿಕ ವಿಚಾರಗಳನ್ನು, ಅವಳ ಸಾಧನೆಯನ್ನು ಹಾಗೂ ಮರಾಠರ ಜೀವನಕ್ರಮವನ್ನು ಕುರಿತು ಸಮಜೋಧಾರ್ಮಿಕ ಸಂಗತಿಗಳನ್ನು ಚರ್ಚಿಸಲಾಗುತ್ತದೆ. ಸಾಧನೆಯೆಂಬುದು ಕೇವಲ ಅಧ್ಯಾತ್ಮದ ಸಾಧನೆಯೊಂದೇ ಅಲ್ಲ. ಬದುಕಿನ ಎಲ್ಲ ರಂಗಗಳಲ್ಲಿಯೂ ಪ್ರಾಮಾಣಿಕ ಪ್ರಯತ್ನಗಳಿಂದ, ಶ್ರದ್ಧೆಯಿಂದ ದುಡಿಯುವುದರ ಮೂಲಕ ಸಾಧನೆ ಮಾಡಲು ಸಾಧ್ಯವೆಂಬುದನ್ನು ತೋರಿಸಿದ ಇಟಗಿ ಭೀಮಾಂಬಿಕೆಯನ್ನು ಹಾಗೂ ಕಿತ್ತೂರು ರಾಣಿ ಚೆನ್ನಮ್ಮನ ಬಲಗೈ ಬಂಟ, ಸತ್ಯ ನಿಷ್ಠೆ, ಪ್ರಾಮಾಣಿಕತೆಯಿಂದ ಕಿತ್ತೂರು ಸಂಸ್ಥಾನ ಉಳಿಸಲು ಪ್ರಯತ್ನಿಸಿದ ಹಾಗೂ ಕರ್ನಾಟಕದಲ್ಲಿ ಸ್ವಾತಂತ್ರ್ಯದ ಮೊದಲ ಕಹಳೆಯನ್ನು ಊದಿದ ವೀರ 'ಸಂಗೊಳ್ಳಿ ರಾಯಣ್ಣ'ನ ಜೀವನಯಾನವನ್ನು ಕುರಿತು ಅನೇಕ ಐತಿಹಾಸಿಕ ವಿಚಾರಗಳನ್ನು ಕುರಿತು ಇದರಲ್ಲಿ ಅಧ್ಯಯನ ಮಾಡಲಾಗುತ್ತದೆ.

**ಅಧ್ಯಾಯ–೫**

**ವಿಮರ್ಶೆ/ಸಂಪಾದನ ಬರಹಗಳು ಹಾಗೂ**
**ಸಾಮಾಜಿಕ ಸಂಶೋಧನೆಗಳ ಅಧ್ಯಯನ**

ವೈದಿಕರು ಸಮಾಜ ಸುಧಾರಕರಾಗಿ ಮತಗಳನ್ನು ಸ್ಥಾಪಿಸಿರಬಹುದು. ಆದರೆ ಯಾವೊಬ್ಬ ಶೂದ್ರನನ್ನು ಗುರುಪರಂಪರೆಯೊಳಗೆ ಬಿಟ್ಟುಕೊಂಡ ನಿದರ್ಶನಗಳಿಲ್ಲ. ಇದಕ್ಕೆ ಅಪವಾದ ವ್ಯಾಸ–ಕನಕರ ಸಂಬಂಧ. ಇದಕ್ಕೂ ಕಾರಣಗಳು ವಿಭಿನ್ನ ನೆಲೆಗಳಲ್ಲಿವೆ. ಇದನ್ನು ಕುರಿತ ಚರ್ಚೆಯನ್ನು ಬಹುಮುಖೀ ನೋಟಗಳಿಂದ ಗ್ರಹಿಸುವ 'ತನುವ ನೇಗಿಲಮಾಡಿ' ಕೃತಿಯಲ್ಲಿ ಕಂಡುಬರುತ್ತದೆ.

'ತನು ಕರಗದವರಲ್ಲಿ' ವಿಮರ್ಶಾ ಸಂಕಲನವು ಅನೇಕ ಚರ್ಚೆಗಳಿಗೆ ಗ್ರಾಸವನ್ನು ಒದಗಿಸಿದೆ. ಈ ಕೃತಿಗೆ ಮುನ್ನುಡಿ ಬರೆದ ಡಾ.ಕೆ.ವಿ. ನಾರಾಯಣ ಅವರು "ಚಾರಿತ್ರಿಕ ಗತಿಯಲ್ಲಿ ಮತ್ತು ಸಮಕಾಲೀನ ಸಂದರ್ಭದಲ್ಲಿ ಮಹಿಳೆಯನ್ನು ಇರಿಸಿ ನೋಡುವುದು, ಕಂಡುಕೊಳ್ಳುವುದು ಇಲ್ಲಿಯ ಲೇಖನಗಳ ಆಶಯ. ಲಿಂಗಾಧಾರಿತ ತಾರತಮ್ಯಗಳು ಬಯಲುಗೊಳ್ಳುವಲ್ಲಿ ಪ್ರಜ್ಞಾಸ್ತರಗಳು ಕೆಲಸ ಮಾಡಿರುವ ವಿಧಾನವನ್ನು ಇಲ್ಲಿ ತೆರೆದಿಡಲು ಯತ್ನಿಸಲಾಗಿದೆ. ಎರಡು ಚಾರಿತ್ರಿಕ ಸಂದರ್ಭಗಳನ್ನು ಮುಕ್ತವಾಗಿ ಚರ್ಚೆಗೆ

ಗುರಿಪಡಿಸುವುದನ್ನು ಇಲ್ಲಿ ಕಾಣುತ್ತೇವೆ"[೨] ಎಂದು ಕೃತಿಯ ಗಂಭೀರ ದರ್ಶನವನ್ನು ತೆರೆದಿಡುತ್ತಾರೆ.

೧೯೨೦ ರಿಂದ ೧೯೮೫ರಲ್ಲಿ ಪ್ರಕಟವಾದ ಕಥೆಗಳನ್ನು ಅಧ್ಯಯನ ಮಾಡಿ ಮಹಿಳಾ ಕಥಾಸಾಹಿತ್ಯದ ವಿಶ್ಲೇಷಣೆಯನ್ನು, ಕಥಾ ಪ್ರಕಾರದ ಬೆಳವಣಿಗೆಯ ಹಂತಗಳನ್ನು ಕಟ್ಟಿಕೊಡುವ ಬಗೆಯನ್ನು ಮಲ್ಲಿಕಾ ಘಂಟಿಯವರ ಸಂಶೋಧನಾ ಕೃತಿಯಲ್ಲಿ ಗಮನಿಸಬಹುದು. 'ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ' ಎಂಬ ಶೀರ್ಷಿಕೆಯಲ್ಲಿ ಮಹಾಪ್ರಬಂಧವನ್ನು ವಿಶ್ಲೇಷಿಸಲಾಗುತ್ತದೆ.

ಮಲ್ಲಿಕಾಘಂಟಿಯವರ ಈ ಮೇಲಿನ ಸೃಜನೇತರ ಕೃತಿಗಳನ್ನು ಸಮಗ್ರವಾಗಿ ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗುವುದು.

**ಅಧ್ಯಾಯ–೬**

**ಸಮಾರೋಪ**

ಮಲ್ಲಿಕಾ ಘಂಟಿಯವರು ಇಂದಿನ ವ್ಯವಸ್ಥೆಯನ್ನು ಬದಲಿಸಲು ಪ್ರಯತ್ನಿಸುವ ಬಗೆ, ಬಡತನ, ನಿರುದ್ಯೋಗ, ಭ್ರಷ್ಟಾಚಾರ, ಅನಾಚಾರ, ಶೋಷಣೆಯನ್ನು ಬುಡದಿಂದಲೇ ಕಿತ್ತೆಸೆಯುವಂತೆ ಜನರಿಗೆ ಕರೆಕೊಡುವ "ಜನಕಾವ್ಯ"ವನ್ನು ಸೃಷ್ಟಿಸಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಇವರ ಇಂತಹ ಸಾಹಿತ್ಯದ ಉದ್ದೇಶವನ್ನು ಅವರ ಬದುಕು, ವಿಶಿಷ್ಟ ಅನುಭವಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗುತ್ತದೆ. ಜೊತೆಗೆ ಮಾನವ ಬದುಕಿನ ಸಹಜ ಗುಣಗಳಾದ ಸ್ತ್ರೀ–ಪುರುಷರ ಪ್ರೀತಿ–ಪ್ರಣಯ, ತವಕ–ತಲ್ಲಣಗಳು, ಈ ಸಮಾಜದ ರಾಜಕೀಯ ಹುನ್ನಾರಗಳು, ದುಷ್ಟ ಆಚರಣೆಗಳನ್ನು ಚರ್ಚಿಸಲಾಗುತ್ತದೆ. ಈ ಎಲ್ಲ ಅಂಶಗಳನ್ನು ಕುರಿತ ಚರ್ಚೆಯನ್ನು ಮುಂದೆ ಬರುವ ಸಾಹಿತ್ಯಾಭ್ಯಾಸಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಸ್ಥೂಲವಾದ ನೆಲೆಯಲ್ಲಿ ಅಧ್ಯಯನ ನಡೆಸುವುದು ಈ ಅಧ್ಯಾಯದ್ದಾಗಿದೆ.

ಇದು ಪ್ರಸ್ತುತ ನಿಬಂಧದ ಸ್ಥೂಲ ಚೌಕಟ್ಟು ಆಗಿದೆ.

ಪುರುಷ ಅಹಂಕಾರವನ್ನು ಪ್ರಶ್ನಿಸುವ ಮೂಲಕ, ಆತ ಹಾಕಿದ ಸಾಮಾಜಿಕ ಬೇಲಿಯನ್ನು ಹೇಗೆ ದಾಟಬೇಕೆಂಬುದನ್ನು ಹೇಳಲು ಹೊರಟಿರುವ ಲೇಖಕರು ಪ್ರತಿಪಾದಿಸುತ್ತಿರುವ ಮೌಲ್ಯಗಳೇನು? ತಮ್ಮ ಸಾಹಿತ್ಯ ಕೃತಿಗಳ ಮೂಲಕ ಈ ಸಮಾಜಕ್ಕೆ

ಯಾವ ಸಂದೇಶವನ್ನು ಕೊಡಲು ಹೊರಟಿದ್ದಾರೆ? ಈ ಎಲ್ಲಾ ಅಂಶಗಳನ್ನು ಈ ಅಧ್ಯಯನದ ವ್ಯಾಪ್ತಿ ಒಳಗೊಂಡಿದ್ದು, ಸುದೀರ್ಘವಾಗಿ ಚರ್ಚಿಸುವ ಉದ್ದೇಶವನ್ನು ಈ ಪ್ರಬಂಧವು ಹೊಂದಿದೆ.

ಮಲ್ಲಿಕಾ ಘಂಟಿ ಅವರ ಕೃತಿಗಳಲ್ಲಿ ಮಹಿಳಾ ನೆಲೆಗಳನ್ನು, ಬಂಡಾಯಪ್ರಜ್ಞೆಯನ್ನು ಶೋಧಿಸುವುದು ಮಾತ್ರವಲ್ಲದೆ ಅವರ ಸಾಹಿತ್ಯದಲ್ಲಿ ಮೈದಾಳಿರುವ ಸಾಮಾಜಿಕ ಆಯಾಮಗಳನ್ನು,ಜೀವನ ಮೌಲ್ಯಗಳನ್ನು ಸಾರ್ವತ್ರಿಕ ಮೌಲ್ಯಗಳನ್ನು, ಸಾಂಸ್ಕೃತಿಕ ಅನನ್ಯತೆಯನ್ನು ವಿಶ್ಲೇಷಿಸುವ ಹಾಗೂ ಸಂಬಂಧದ ಮೇಲೆ ಕುರಿತು ಬೆಳಕನ್ನು ಚೆಲ್ಲುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗುತ್ತದೆ.

ಒಟ್ಟಾರೆ ಮಲ್ಲಿಕಾ ಘಂಟಿ ಅವರ ಸಾಹಿತ್ಯ ಪ್ರಪಂಚದ ಕಾಳಜಿಗಳನ್ನು, ವೈಶಿಷ್ಟ್ಯಗಳನ್ನು, ಲೇಖಕರ ಮನದಾಳದ ಹಂಬಲವನ್ನು, ಸಾಂಸ್ಕೃತಿಕ ಆವರಣವನ್ನು ಹೆಣ್ಣಿನ ಬದುಕಿನ ಅಸ್ಮಿತೆಯ ವಿಭಿನ್ನ ನೆಲೆಗಳನ್ನು ವೈಚಾರಿಕವಾಗಿ ಯಾವುದೇ ಪೂರ್ವಗ್ರಹ ಪೀಡಿತ ಭಾವನೆಗಳಿಲ್ಲದೆ ಸುದೀರ್ಘವಾದ ಚರ್ಚೆಗೆ ಒಳಪಡಿಸುವ ಉದ್ದೇಶ ಮತ್ತು ವ್ಯಾಪ್ತಿಯನ್ನು ಈ ಸಂಪ್ರಬಂಧವು ಒಳಗೊಂಡಿರುತ್ತದೆ.

### ಕೊನೆಟಿಪ್ಪಣಿಗಳು

೧. ಉದ್ಧೃತ : ರೂಪ ಹಾಸನ ಅವರ ಕವಿತೆಗಳ ವಿಚಾರವಿಮರ್ಶೆ, ಕೆಂಪಹೊನ್ನಯ್ಯ, ೨೦೧೪, ಪು. ೪

೨. 'ತನು ಕರಗದವರಲ್ಲಿ', ಮುನ್ನುಡಿ, ಪು. ೧

೩. ಅಹಲ್ಯಾಬಾಯಿ ಹೋಳ್ಕರ್, ಮುನ್ನುಡಿ, ಪು. ೧

# ಅಧ್ಯಾಯ ಎರಡು

# ಮಲ್ಲಿಕಾ ಘಂಟಿ ಅವರ ಬದುಕಿನ ಹಿನ್ನೋಟ : ಪರಿಚಯ

ಆಧುನಿಕ ಕನ್ನಡ ಸಾಹಿತ್ಯ ಎಂದ ತಕ್ಷಣ ಹತ್ತೊಂಬತ್ತನೆ ಶತಮಾನದ ಕೊನೆಯ ಭಾಗ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ಕಾಲಘಟ್ಟವನ್ನು ನಾವು ನೋಡುತ್ತೇವೆ. ಈ ಸಾಹಿತ್ಯವು ಒಂದು ಪ್ರಜ್ಞಾಪೂರ್ವಕವಾದ ನೆಲೆಯಲ್ಲಿ ಸೃಷ್ಟಿಗೊಂಡಿದೆ. ಇದಕ್ಕೆ ಕಾರಣ ಪಾಶ್ಚಾತ್ಯ ಶಿಕ್ಷಣ ಮತ್ತು ಇಂಗ್ಲಿಷ್ ಸಾಹಿತ್ಯದ ಪ್ರೇರಣೆ. ಅದರ ಪ್ರವೇಶದಿಂದಾಗಿ ಇಲ್ಲಿ ಹೊಸ ಸಾಹಿತ್ಯ ನಿರ್ಮಾಣವಾಯಿತು. ಈ ಯುಗಧರ್ಮಕ್ಕೆ ಅನುಗುಣವಾಗಿ ಕನ್ನಡ ಸಾಹಿತ್ಯದಲ್ಲಿ ಹಲವು ಸಾಹಿತ್ಯಕ ಚಳವಳಿಗಳು ಕಂಡುಬಂದವು. ಅವುಗಳು ಕ್ರಮವಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಸಾಹಿತ್ಯ. ಇತ್ತೀಚಿನ ದಿನಗಳಲ್ಲಿ ಸ್ತ್ರೀವಾದಿ ಸಾಹಿತ್ಯ ಮತ್ತು ಮುಸ್ಲಿಂ ಚಿಂತನೆಗಳು ಕಂಡುಬರುತ್ತಿವೆ.

ಸ್ತ್ರೀವಾದಿ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ನೆಲೆಯನ್ನು ಪಡೆದುಕೊಳ್ಳಲು ಅಥವಾ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ಸ್ತ್ರೀವಾದಿ ಸಾಹಿತ್ಯ ಸಮಾಜಮುಖಿ ಚಿಂತನೆ, ಮಾನವೀಯತೆ, ವೈಚಾರಿಕತೆಯನ್ನು ಒಳಗೊಂಡು ಎಂಬತ್ತರ ದಶಕದಲ್ಲಿ ಕಾಣಿಸಿಕೊಳ್ಳಲಾರಂಭಿಸುತ್ತದೆ. ಇದು ಹಲವು ಬರಹಗಾರ್ತಿಯರ ಮೂಲಕ ಸಮಾಜಮುಖಿಯಾಗಿ ತೆರೆದುಕೊಂಡಿದೆ. ಹೊಸಗನ್ನಡ ಸಾಹಿತ್ಯ ಸಂದರ್ಭದ ಆರಂಭದಲ್ಲಿ ನಂಜನಗೂಡಿನ ತಿರುಮಲಾಂಬ, ಆರ್.ಕಲ್ಯಾಣಮ್ಮ, ತಿರುಮಲೈ ರಾಜಮ್ಮ, ಎಂ.ಕೆ.ಇಂದಿರಾ, ತ್ರಿವೇಣಿ, ಜಯದೇವಿತಾಯಿ ಲಿಗಾಡೆ ಮುಂತಾದವರು ಈ ಸಂಬಂಧ ತಮ್ಮ ಅನನ್ಯತೆಯನ್ನು ಅನಾವರಣಗೊಳಿಸಿದರು. ಎಂಬತ್ತರ ದಶಕದಿಂದೀಚೆಗೆ ಶೈಲಜಾ ಉಡಚಣ, ಮಾಲತಿ ಪಟ್ಟಣಶೆಟ್ಟಿ, ಎನ್.ವಿ.ಭಾಗ್ಯಲಕ್ಷ್ಮೀ, ಕಮಲ ಹೆಮ್ಮಿಗೆ, ಪ್ರತಿಭಾ ನಂದಕುಮಾರ್, ಚ.ಸರ್ವಮಂಗಳಾ ಮೊದಲಾದ ಸ್ತ್ರೀವಾದಿ ಚಿಂತಕರು ಬೆಳಕಿಗೆ ಬಂದರು. ಪ್ರಸ್ತುತ ಸಂದರ್ಭದಲ್ಲಿ ವಿಜಯಾ ದಬ್ಬೆ, ಬಿ.ಎನ್.ಸುಮಿತ್ರಾಬಾಯಿ, ಕಮಲಾ ಹಂಪನಾ, ಮಲ್ಲಿಕಾ ಘಂಟಿ, ಸವಿತಾ ನಾಗಭೂಷಣ, ಗೀತಾನಾಗಭೂಷಣ ಮುಂತಾದವರು ಕವಿಗಳಾಗಿ, ಲೇಖಕರಾಗಿ, ವಿಮರ್ಶಕರಾಗಿ, ಸಂಶೋಧಕರಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಸ್ತ್ರೀ ಜಗತ್ತಿನ ಅಸ್ಮಿತೆಯನ್ನು ಸೃಜಿಸುವ ಮೂಲಕ ಹಲವು ಸವಾಲುಗಳನ್ನೆದುರಿಸಿ ಕಾಲೂರಿದ್ದಾರೆ.

ಪರಂಪರಾಗತ ಮಹಿಳೆ ಮತ್ತು ಆಧುನಿಕ ಮಹಿಳೆಯ ಮನಸ್ಸು ಒಂದಾಗಿ ಎಪತ್ತರ ದಶಕದಲ್ಲಿ ಸ್ತ್ರೀವಾದಕ್ಕೆ ಒಂದು ಗಟ್ಟಿನೆಲೆಯನ್ನು ಒದಗಿಸಿತು ಎಂಬುದನ್ನು ಮರೆಯಲಾಗುವುದಿಲ್ಲ. ಈ ದಶಕ ಮಹಿಳೆಗೆ ಒಂದು ಭರವಸೆಯನ್ನು ತಂದುಕೊಟ್ಟ

ಕಾಲಘಟ್ಟ. ಹೆಣ್ಣು ಬರೆದ ಸಾಹಿತ್ಯ ಬರಿಯ 'ಅಡುಗೆಮನೆ ಸಾಹಿತ್ಯ' ಅಥವಾ 'ದ್ವಿತೀಯ ದರ್ಜೆಯ ಸಾಹಿತ್ಯ' ಎಂದುಕೊಂಡಿದ್ದ ಅಂದಿನ ಸಮಾಜಕ್ಕೆ ಒಂದು ಹೊಸ ಪೆಟ್ಟನ್ನು ಕೊಟ್ಟು, ಆ ಮೂಲಕ ಮನೆಯ ಹೊಸ್ತಿಲನ್ನು ದಾಟಿ ಸಾಹಿತ್ಯ ರಚಿಸಿ ತಾನು ಬರೆಯುವ ಸಾಹಿತ್ಯ ಸಾಮಾಜಿಕ ಪ್ರಜ್ಞೆಯನ್ನೊಳಗೊಂಡದ್ದು ಎಂಬುದನ್ನು ಸಾಬೀತುಪಡಿಸಿತು. ಇದರಿಂದಾಗಿ ಮಹಿಳೆಯ ಸಾಹಿತ್ಯದ ನೆಲೆಗಳೇ ಬದಲಾದವು. ಇವರ ಸಾಹಿತ್ಯ ಯುವಜನಾಂಗಕ್ಕೆ ಪ್ರೇರಣೆಯನ್ನಿತ್ತಿತು. ಹೊಸ ಹೊಸ ಆಲೋಚನಾ ಕ್ರಮಗಳು ಬರತೊಡಗಿದವು. ಹೆಣ್ಣಿನ ಸೃಜನಶೀಲತೆಗೆ ಒಂದು ಅಪೂರ್ವ ಜೀವಂತಿಕೆ ಇದೆ ಎಂಬುದನ್ನು ಅಂದಿನ ಸಮಾಜಕ್ಕೆ ಅರ್ಥೈಸಿದರು. ಇವರ ಚಿಂತನೆಗಳು ಸಾಮಾನ್ಯ ಜನರನ್ನು ಬಡಿದೆಬ್ಬಿಸಿದವು. ಇತರರ ಮೇಲೆ ಪ್ರಭಾವವನ್ನು ಬೀರತೊಡಗಿದವು. ಈ ಮಹಿಳೆಯರು ಸಾಮಾನ್ಯರಲ್ಲಿಯೇ ಅಸಾಮಾನ್ಯರೆನಿಸಿ-ಕೊಳ್ಳತೊಡಗಿದರು. ಇಂತಹ ಅಸಾಮಾನ್ಯ ಮಹಿಳಾ ಚಿಂತಕಿಯರಲ್ಲಿ ಮಲ್ಲಿಕಾ ಘಂಟಿ ಬಹಳ ಮುಖ್ಯರಾಗುತ್ತಾರೆ.

ಇಪ್ಪತ್ತನೆಯ ಶತಮಾನದ ಕೊನೆಯಲ್ಲಿ ಸಾಹಿತ್ಯ ಕೃಷಿಗೆ ಕೈಹಾಕಿರುವವರಲ್ಲಿ ಮಲ್ಲಿಕಾ ಘಂಟಿ ಪ್ರಮುಖರು. ಅವರು ಈ ಸಮಾಜದ ನಿರ್ಲಕ್ಷಿತ ಜನಸಮೂಹದಿಂದ ಬಂದವರಾಗಿದ್ದು, ವೈಚಾರಿಕ ನೆಲೆಗಟ್ಟಿನಲ್ಲಿ ಹೆಣ್ಣಿನ ತವಕ-ತಲ್ಲಣಗಳನ್ನು ತಮ್ಮ ಬರಹಗಳ ಮೂಲಕ ಅಭಿವ್ಯಕ್ತಪಡಿಸುತ್ತಿರುವ ಸಮಾಜವಾದಿ ಚಿಂತಕಿ. ಇವರು ಹಲವು ಕವನಸಂಕಲನಗಳನ್ನು, ನಾಟಕ, ಜೀವನಚರಿತ್ರೆ, ವಿಮರ್ಶೆಯನ್ನು ಹಾಗೂ ಹಲವು ಕೃತಿಗಳನ್ನು ಗಂಭೀರ ನೆಲೆಯಲ್ಲಿ ಸಂಪಾದಿಸಿದ್ದಾರೆ.

**ಬಾಲ್ಯದ ನೆನಪುಗಳು**

ಮಲ್ಲಿಕಾ ಎಸ್. ಘಂಟಿಯವರು ಶಂಕರಪ್ಪ ಘಂಟಿ ಮತ್ತು ಪಾರ್ವತಿಯವರ ಹಿರಿಯ ಮಗಳಾಗಿ ವಿಜಯಪುರ ಜಿಲ್ಲೆ, ಬಸವನ ಬಾಗೇವಾಡಿ ತಾಲ್ಲೂಕಿನ ಅಗಸಬಾಳ ಗ್ರಾಮದಲ್ಲಿ ೧೭ ಏಪ್ರಿಲ್, ೧೯೫೯ರಲ್ಲಿ ಜನಿಸಿದರು. ಬೆಳೆದದ್ದು ಬಾಲ್ಯ ಕಳೆದದ್ದು ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಹಂಗರಗಿಯಲ್ಲಿ. ಇವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಇದೇ ಹಂಗರಗಿ ಹಾಗೂ ಬೇರೆ ಬೇರೆ ಸ್ಥಳಗಳಲ್ಲಿ ಪಡೆದರು.

ಉತ್ತರ ಕರ್ನಾಟಕದ ಬಿರುಬಿಸಿಲಿನ ಯಾವುದೇ ನಾಗರಿಕ ಸೌಲಭ್ಯಗಳು ಲಭ್ಯವಾಗಿರದಿದ್ದ ಒಂದು ಕುಗ್ರಾಮದ ರೈತಾಪಿ ಕುಟುಂಬದಲ್ಲಿ ಹುಟ್ಟಿ ಬೆಳೆದವರು ಮಲ್ಲಿಕಾರವರು. ಸಹಜವಾಗಿ ಎಲ್ಲಾ ಹೆಣ್ಣುಮಕ್ಕಳಿಗೆ ಎರಡೆರಡು ಊರುಗಳು, ಕುಟುಂಬಗಳು ಇರುವ ರೀತಿಯಲ್ಲಿಯೇ ಇವರಿಗೂ ಅಗಸಬಾಳ ಮತ್ತು ಹಂಗರಗಿ ಗ್ರಾಮಗಳ ಸಾಂಸ್ಕೃತಿಕ ವಾತಾವರಣದ ಗಾಳಿ ತಾಗಿದೆ.

ಜಗತ್ತಿಗೆಲ್ಲ ಅಕ್ಷರ, ಅರಿವು, ಜ್ಞಾನ ನೀಡುವ ಸ್ಥಾನವಾದ ಶಿಕ್ಷಕ ವೃತ್ತಿಯಲ್ಲಿ ಅಜ್ಜ, ತಂದೆ, ತಾಯಿ ಇದ್ದರೂ, ಮನೆಯ ಹೆಣ್ಣುಮಕ್ಕಳಿಗೆ ಓದಿಸಿದರೆ ಕೆಟ್ಟುಹೋಗುತ್ತಾರೆ ಎಂಬ ಜಮೀನ್ದಾರಿಕೆಯ ಬೇಲಿಯನ್ನು ಮನೆಗೆಲ್ಲಾ ಹಾಕಿ ಮಲ್ಲಿಕಾರವರ ಓದಿಗೆ ಯಾವುದೇ ಪ್ರೋತ್ಸಾಹವನ್ನು ಮನೆಯಲ್ಲಿ ಕೊಡಲಿಲ್ಲ ಎಂಬುದು ಗಮನಾರ್ಹ ವಿಚಾರ.

ಮಲ್ಲಿಕಾರವರ ಬಾಲ್ಯದಲ್ಲಿ ನಡೆದ ಕೆಲವು ಘಟನೆಗಳನ್ನು ಕುರಿತು ವೆಂಕಟಗಿರಿ ದಳವಾಯಿಯವರು ಹೀಗೆ ಹೇಳುತ್ತಾರೆ:

- "ಅದೊಂದು ದಿನ ಮನೆಯಂಗಳದಲ್ಲಿ ಆಟವಾಡುತ್ತಿದ್ದ ಐದು ವರ್ಷದ ಮಗಳು ಇದ್ದಕ್ಕಿದ್ದಂತೆ ಕಾಣೆಯಾಗಿದ್ದು, ಮನೆಮಂದಿಯವರಿಗೆಲ್ಲ ಗಾಬರಿ ದುಗುಡ ದುಃಖದ ಉಮ್ಮಳಿಕೆಯಲ್ಲಿಯೇ ಊರ ತುಂಬಾ ಹುಡುಕಾಟ. ಕೊನೆಗೂ ಊರ ಹೊರಗೆ ಗುಳೇದಗುಡ್ಡದ ಹಾದಿಗೆ ಮೊಸರು ಮಾರುವ ಹೆಣ್ಣು ಮಗಳೊಂದಿಗೆ ಕೈಯಲ್ಲಿ ರೊಟ್ಟಿ ಹಿಡಿದ ಹುಡುಗಿ ಸಿಕ್ಕಳು".[೧]
- "ಸಿಟ್ಟಿನಲ್ಲಿಯ ಅವ್ವನ ಬಡಿತವನ್ನು ತಾಳಲಾರದೆ, ಬಿಕ್ಕಳಿಸುತ್ತಲೇ ಬಾದಾಮಿಯ ಹೊಂಡಕ್ಕೆ ಬಿದ್ದು ಸಾಯುವ ನಿರ್ಧಾರ. ಮನೆಯಿಂದ ಹೊಂಡಕ್ಕೆ ಹೊರಡುವುದರಲ್ಲಿಯೇ ಭಯಂಕರ ಹಸಿವು, ನಿದ್ದೆ, ನಿದ್ದೆಯಿಂದೆದ್ದು ಹಸಿವನ್ನು ತಾಳಲಾರದೆ ಪುನಃ ಅವ್ವನ ಮಡಿಲಿಗೆ ಸೇರಿದಳು. ಆಗ ಆ ಹುಡುಗಿಯ ವಯಸ್ಸು ಕೇವಲ ೧೦ ವರ್ಷ!"[೨]
- "ಮನೆಗೆ ಹಿರಿಯ ಮಗಳು. ಅಪ್ಪ-ಅಮ್ಮ ಇಬ್ಬರೂ ಶಿಕ್ಷಕರು. ಇದರಿಂದಾಗಿ ಮನೆಯ ಸಂಪೂರ್ಣ ಜವಾಬ್ದಾರಿ ಚಿಕ್ಕಪ್ರಾಯದ ಹುಡುಗಿಯ ಮೇಲೆ. ಅಷ್ಟೇ ಅಲ್ಲ, ಕುಟುಂಬದ ನೆಮ್ಮದಿಗಾಗಿ ಅವ್ವನ ತಮ್ಮನೊಂದಿಗೆ ಮದುವೆ ನಿಶ್ಚಯ. ನಿಶ್ಚಯವಾದದ್ದು ತಿಳಿದು ತುಂಬ ಖುಷಿ. ಇದಕ್ಕೆ ಕಾರಣ ಮದುವೆಯೆಂದಲ್ಲ. ಮದುವೆಯಲ್ಲಿ ಎರಡು ಹೊಸ ಸೀರೆ ಕೊಡಿಸುತ್ತಾರೆಂದು. ಇಂತಹ ಮುಗ್ಧ ಆಸೆ ಹುಟ್ಟಿದಾಗಿನ ವಯಸ್ಸು ಕೇವಲ ೧೨ ವರ್ಷ!"[೩]

ಈ ಮೂರು ಘಟನೆಗಳಲ್ಲಿ ಯಾವುದಾದರೊಂದು ವ್ಯತ್ಯಾಸಗೊಂಡಿದ್ದರೂ ಮಲ್ಲವ್ವ ಮಲ್ಲಿಕಳಾಗುವುದು ಸಾಧ್ಯವಿರಲಿಲ್ಲ.

ಘಂಟಿಯವರ ಮೇಲೆ ಅವರ ಅಜ್ಜಿ, ಚಿಕ್ಕಪ್ಪಂದಿರಿಗೆ ಒಂದು ವಿಶೇಷವಾದ ಪ್ರೀತಿ ಇತ್ತು. ಇದಕ್ಕೆ ಕಾರಣ ಘಂಟಿಯವರ ತಾತನಿಗೆ ಇಬ್ಬರು ಹೆಂಡತಿಯರು. ಅವರಲ್ಲಿ ಒಬ್ಬರು ತೀರಿಕೊಂಡಿದ್ದರು. ಅವರ ಹೆಸರನ್ನೇ ಮಲ್ಲಿಕಾ ಘಂಟಿಯವರಿಗೆ ಇಟ್ಟು ಮತ್ತೆ ಆಕೆ ಮನೆಯಲ್ಲಿ ಹುಟ್ಟಿ ಬಂದಿರುವಳೆಂದು ವ್ಯಾಮೋಹದಿಂದ ಇವರನ್ನು ಪ್ರೀತಿಸುತ್ತಾರೆ. ಅಲ್ಲದೆ

ಇವರ ಮನೆಗೆ ಘಂಟಿಯವರೇ ಮೊದಲ ಮೊಮ್ಮಗಳಾದ ಕಾರಣ ಇನ್ನು ಸ್ವಲ್ಪಮಟ್ಟಿಗೆ ಪ್ರೀತಿ ಹೆಚ್ಚಿರುತ್ತದೆ.

ಘಂಟಿಯವರು ಬಾಲ್ಯದಲ್ಲಿ ಸಂತೆಗೆ ಹೋಗಿ ಕಾಳು ಮಾರುತ್ತಾರೆ. ಅಲ್ಲದೆ ಜೋಳದ ಬೆಳೆಯ ದಿನಗಳಲ್ಲಿ ಹೊಲ ಕಾಯಲು ಬೆಳಕು ಹರಿಯುವ ಮೊದಲೇ ಹಕ್ಕಿ ಹೊಡೆಯಲು ಹೊಲಕ್ಕೆ ಹೋಗುತ್ತಾರೆ. ಸುಗ್ಗಿ ಕಾಲದಲ್ಲಿ ರಾಶಿ ಮಾಡಲು ಕಣ ಮಾಡುವ ಕೆಲಸ ಮಾಡುತ್ತಾರೆ. ರಾಶಿ ದಿನಗಳಲ್ಲಿ ರಾತ್ರಿ ಕಣದಲ್ಲಿ ಒಬ್ಬಳೇ ಮಲಗುವ ಕೆಲವು ಪ್ರಸಂಗಗಳು ನಿರ್ಮಾಣವಾಗುತ್ತದೆ. ರಾತ್ರಿಯ ಸಮಯದಲ್ಲಿ ಇವರ ಚಿಕ್ಕಪ್ಪ ಹೊಲ ಕಾಯಲು ಕರೆದುಕೊಂಡು ಹೋಗಿ ಸ್ವಲ್ಪ ಹೊತ್ತಿನವರೆಗೆ ಹೊಲದಲ್ಲಿ ಘಂಟಿಯವರ ಜೊತೆಗಿದ್ದು ಆನಂತರ ಇವರೊಬ್ಬರನ್ನೇ ಹೊಲದಲ್ಲೇ ಬಿಟ್ಟು ಚಿಕ್ಕಪ್ಪ ಊರ ಕಡೆಗೆ ಬಂದುಬಿಡುತ್ತಾರೆ. ಏನೂ ಅರಿಯದ ವಯಸ್ಸಿನಲ್ಲಿದ್ದ ಮಲ್ಲಿಕಾ ಕಗ್ಗತ್ತಲು ರಾತ್ರಿಯಲ್ಲಿ ಮುಗಿಲಿನಲ್ಲಿ ದೀಪ ಹಚ್ಚಿದಂತಿದ್ದ ನಕ್ಷತ್ರಗಳ ಬೆಳಕಿನಲ್ಲಿ ಕಣ್ಣ ಬೆಳಕನ್ನು ಹೊಂದಿಸಿ ಒಂದೆರಡು ಸುತ್ತ ಹಂತಿ ಹೊಡೆದು ಸುಸ್ತಾಗಿ ಬೀಸುತ್ತಿದ್ದ ತಂಪಾದ ಗಾಳಿಯಲ್ಲಿ ಕಣ್ಣುಗಳು ನಿದ್ರೆಗೆ ಎಳೆದು ತರುತ್ತಿದ್ದವಂತೆ. ಹಂತಿ ಹೊಡೆಯುತ್ತಾ ಕಣದ ದಂಡೆಯ ಮೇಲೆಯೇ ಮಲಗಿ ಬಿಡುತ್ತಿದ್ದರಂತೆ. ಕತ್ತಲೆಯ ಭಯವೇ ಇವರನ್ನು ಕಾಡುತ್ತಿರಲಿಲ್ಲವಂತೆ. ಇಂತಹ ಕಷ್ಟದ ದಿನಗಳನ್ನು ಎದುರಿಸಿ ಬಂದ ಮಲ್ಲಿಕಾರ ಓದುವ ಉತ್ಸಾಹಕ್ಕೆ ತಾಯಿ, ಅಜ್ಜಿ ಅಲ್ಪಸ್ವಲ್ಪ ಪ್ರೋತ್ಸಾಹ ಕೊಡುತ್ತಾರೆ.

ಆನಂತರ ಪ್ರಾಥಮಿಕ ಶಾಲೆಯಲ್ಲಿ 'ಆಡಗಲ್' ಎಂಬ ಶಿಕ್ಷಕಿ ಹಾಗೂ ಹೈಸ್ಕೂಲ್‌ನಲ್ಲಿ 'ಗುಬ್ಬಿ' ಎಂಬ ಶಿಕ್ಷಕಿ ಇವರ ಮೇಲೆ ತುಂಬಾ ಪ್ರಭಾವ ಬೀರುತ್ತಾರೆ. ಇವರ ಪ್ರೋತ್ಸಾಹದಿಂದ ಹೈಸ್ಕೂಲ್ ಸಂದರ್ಭದಿಂದಲೇ ತಾನೂ ಕೂಡ ಇವರಂತೆಯೇ ಶಿಕ್ಷಕಿಯಾಗಬೇಕೆಂದು ಕನಸು ಕಾಣುತ್ತಿದ್ದರಂತೆ. ಆ ಎಳೆಯ ವಯಸ್ಸಿನ ಹಸಿಬಿಸಿ ಮನಸ್ಸಿನಲ್ಲಿ ಶಿಕ್ಷಕಿಯಾಗಬೇಕೆಂದುಕೊಂಡಿದ್ದ ಬಾಲಿಶ ಕನಸು ಇವರನ್ನು ವಿಶ್ವವಿದ್ಯಾನಿಲಯಕ್ಕೆ ತಂದುಬಿಡುತ್ತದೆಂದು ಬಹುಶಃ ಮಲ್ಲಿಕಾ ಘಂಟಿಯವರಿಗೆ ಅನಿಸಿರಲಿಲ್ಲವೇನೋ.

ಅಷ್ಟೊತ್ತಿಗಾಗಲೇ ಘಂಟಿಯವರಿಗೆ ಒಬ್ಬ ತಂಗಿ ಹುಟ್ಟಿದಳು. ಆ ಸಂದರ್ಭದ ಎಲ್ಲ ಹೆಣ್ಣು ಮಕ್ಕಳಂತೆ ಬಾಣಂತಿ ಕೆಲಸವನ್ನು ಇವರೇ ಮಾಡುತ್ತಾರೆ. ಘಂಟಿಯವರ ತಾಯಿಗೆ ಆರು ಜನ ಸಹೋದರರು ಇರುತ್ತಾರೆ. ಅವರಲ್ಲಿ ಐದನೆಯ ಸಹೋದರನ ಹೆಸರು ಗಣಪತಿ. ಇವರು ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿ ಸಿ.ಆರ್.ಪಿ.ಎಫ್‌ನಲ್ಲಿ ಪೋಲಿಸ್ ನೌಕರಿಗೆ ಸೇರಿಕೊಂಡಿರುತ್ತಾರೆ. ಇವರಿಗೆ ಘಂಟಿಯವರನ್ನು ಕೊಟ್ಟು ಮದುವೆ ಮಾಡಬೇಕೆಂಬ ಆಸೆ ಹಾಗೂ ಹಠ ಘಂಟಿಯವರ ತಾಯಿಗೆ ಇರುತ್ತದೆ. ಇದಕ್ಕೆ ಕಾರಣವೂ ಇದೆ. ಅದೇನೆಂದರೆ

ಘಂಟಿಯವರ ತಾಯಿಗೆ ಗಂಡನ ಮನೆಯಲ್ಲಿ ತುಂಬಾ ಕಿರುಕುಳವಿರುತ್ತದೆ. ಈ ಹಿಂಸೆಯಿಂದ ತಪ್ಪಿಸಿಕೊಳ್ಳಲು ಹಾಗೂ ತವರು ಮನೆಯಲ್ಲಿ ತನ್ನ ಹಕ್ಕು ಉಳಿಯಬೇಕೆಂದರೆ ತಮ್ಮ ಮಗಳು ಘಂಟಿಯವರನ್ನು ಗಣಪತಿಗೆ ಮದುವೆ ಮಾಡಿಕೊಟ್ಟರೆ ಎಲ್ಲವು ಸರಿಯಾಗುತ್ತದೆ ಎಂದು ಮದುವೆ ಮಾಡಲು ಹಠ ತೊಡುತ್ತಾರೆ. ಆದರೆ ಗಂಡನ ಮನೆಯವರಿಗೆ ಈ ಮದುವೆ ಇಷ್ಟವಿರುವುದಿಲ್ಲ. ಏಕೆಂದರೆ ಘಂಟಿಯ ತಾಯಿಯ ಮನೆಯವರು ತುಂಬಾ ಬಡವರು. ಹೊಲ, ಮನೆ ಇಲ್ಲದವರು ಇವರಿಗೆ ಮಗಳನ್ನು ಹೇಗೆ ಮದುವೆ ಮಾಡುವುದು ಎಂಬುದು. ಅಲ್ಲದೆ ಇದು ಅವರ ತಾತ, ಅಜ್ಜಿಯವರಿಗೆ ಪ್ರತಿಷ್ಠೆಯ ಸಂಗತಿಯಾಗಿತ್ತು. ಅಂತೂ ಘಂಟಿಯವರ ತಾಯಿಯ ಹಠವೇ ಗೆಲ್ಲುತ್ತದೆ.

ಘಂಟಿಯವರ ತಾಯಿ ಮಲ್ಲಿಕಾ ಹುಟ್ಟಿದಾಗ ಕೂಸನ್ನು ಎತ್ತಿ ಆಡಿಸಲು ಗಣಪತಿಯವರನ್ನು ತಮ್ಮ ಮನೆಗೆ ಕರೆದುಕೊಂಡು ಬಂದಿರುತ್ತಾರೆ. ಅಂಥವರ ಜೊತೆಗೆ ಘಂಟಿಯವರ ಮದುವೆ ನಿಶ್ಚಯವಾಗುತ್ತದೆ. ಮದುವೆ ನಿಶ್ಚಯವಾದದ್ದನ್ನು ಕೇಳಿ ಮಲ್ಲಿಕಾರಿಗೆ ತುಂಬಾ ಖುಷಿ. ಕಾರಣವೇನೆಂದರೆ ಮದುವೆಯಲ್ಲಿ ತನಗೆ ಬಹಳಷ್ಟು ಸೀರೆ ಕೊಡಿಸುತ್ತಾರೆಂದು. ಅಂತೂ ಘಂಟಿಯವರ ತಾಯಿಯ ಹಠವೇ ಗೆದ್ದು ಗೋಧಿ, ಸಜ್ಜಕಾ, ಅನ್ನ, ಸಾಂಬಾರ್ ಮೂಲಕ ಗಣಪತಿಯವರ ಜೊತೆ ಮಲ್ಲಿಕಾ ಘಂಟಿಯವರ ಮದುವೆ ಗೊಂಬೆ ಆಟದಂತೆಯೇ ಮುಗಿದುಹೋಗುತ್ತದೆ.

**ವಿದ್ಯಾಭ್ಯಾಸ**

ಪ್ರಾಥಮಿಕ ಶಾಲೆಯಲ್ಲಿ 'ಆಡಗಲ್' ಹಾಗೂ ಹೈಸ್ಕೂಲ್‌ನಲ್ಲಿ 'ಗುಬ್ಬಿ' ಎಂಬ ಶಿಕ್ಷಕಿಯರುಗಳಿಂದ ಪ್ರಭಾವಿತಗೊಂಡ ಮಲ್ಲಿಕಾ ಘಂಟಿಯವರು ಮದುವೆಯಾದ ನಂತರ ಗಂಡನ ಪ್ರೋತ್ಸಾಹದೊಂದಿಗೆ ಪಿಯುಸಿಗೆ ಸೇರುತ್ತಾರೆ. ಅನೇಕ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಪಿಯುಸಿಯನ್ನು ಪಾಸುಮಾಡುತ್ತಾರೆ. ಕುಟುಂಬದ ಮನಸ್ತಾಪಗಳ ನಡುವೆ ವಿಚಿತ್ರ ಯಾತನೆಯನ್ನು ಪಡುತ್ತಾರೆ. ಗಂಡ ದೂರದ ಸಶಸ್ತ್ರ ಮೀಸಲು ಪಡೆಯಲ್ಲಿದ್ದುದರಿಂದ ಕುಟುಂಬವನ್ನು ಅಲ್ಲಿಗೆ ತೆಗೆದುಕೊಂಡು ಹೋಗಲು ಸಾಧ್ಯವಾಗದಿದ್ದರಿಂದ ತಂದೆಯ ಮನೆಯಲ್ಲಿ ಉಳಿಯಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಗಂಡನ ಪ್ರೀತಿ, ಅನುರಾಗ ದೊರೆಯದೆ ಕುಟುಂಬದ ಹಿಂಸೆಗೆ ಸಿಕ್ಕಿ ನರಳುತ್ತಾರೆ. ಅಂತಹ ಸಂದರ್ಭದಲ್ಲಿ ಗಂಡನ ಪ್ರೀತಿಗೆ ಬದಲಾಗಿ ಇವರು ಪುಸ್ತಕಗಳನ್ನೇ ತಮ್ಮ ಬಾಳಸಂಗಾತಿಯನ್ನಾಗಿ ಮಾಡಿಕೊಂಡು ವಿದ್ಯಾಭ್ಯಾಸ ಮುಂದುವರೆಸುತ್ತಾರೆ.

ಪದವಿ ಶಿಕ್ಷಣ ಪಡೆಯುವ ಸಂದರ್ಭ ಸಂಬಂಧಿಕರ ಮನೆಗಳಲ್ಲಿ ಚಾಕರಿಮಾಡಿ ಓದು ಮುಂದುವರೆಸುವ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿತ್ತು. "ಹಸಿವನ್ನು ನೀಗಿಸಿಕೊಂಡು

ನಿರಂತರ ಕೆಲಸ ಮಾಡುತ್ತಾ ದೂರದಲ್ಲಿದ್ದ ಗಂಡನ ಪತ್ರಗಳಿಗಾಗಿ ಕಾಯುತ್ತಾ ಕಷ್ಟದಿಂದ ಪದವಿಯನ್ನು ಪಡೆದ ಮಲ್ಲಿಕಾರ ಬದುಕನ್ನು ಸರಳ ರೇಖೆಯಲ್ಲಿರಿಸಿ ನೋಡಲು ಸಾಧ್ಯವಾಗುವುದಿಲ್ಲ"[6] ಎನ್ನುತ್ತಾರೆ ವೆಂಕಟಗಿರಿ ದಳವಾಯಿ.

ಜಮಖಂಡಿಯಲ್ಲಿ ಪದವಿಗೆ ಸೇರಿಕೊಂಡ ಮಲ್ಲಿಕಾರವರು ಬಿ.ಎ.ನಲ್ಲಿ ಪ್ರಥಮದರ್ಜೆಯಲ್ಲಿ ಪಾಸಾಗಿದ್ದಲ್ಲದೆ, ಕನ್ನಡ ವಿಷಯದಲ್ಲಿ ಕಾಲೇಜಿಗೆ ಮೊದಲಿಗರಾಗುತ್ತಾರೆ. ಆನಂತರ ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಉನ್ನತ ದರ್ಜೆಯ ಮೂಲಕ ಪಡೆಯುತ್ತಾರೆ. ಮುಂದುವರೆದು ಇದೇ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ ವೀರಣ್ಣ ರಾಜೂರ ಅವರ ಮಾರ್ಗದರ್ಶನದಲ್ಲಿ 'ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ' ಎಂಬ ವಿಷಯವನ್ನು ಕುರಿತು ಪಿಹೆಚ್.ಡಿ. ಸಂಶೋಧನೆ ಕೈಗೊಂಡು ಡಾಕ್ಟರೇಟ್ ಪದವಿಯನ್ನು ಪಡೆದುಕೊಳ್ಳುತ್ತಾರೆ.

**ಹೋರಾಟದ ಹಾದಿ**

ಮಲ್ಲಿಕಾ ಘಂಟಿಯವರು ಶಿಕ್ಷಣ, ಸಂಘಟನೆ, ಹೋರಾಟದೊಂದಿಗೆ ನಿರಂತರವಾಗಿ ಗುರ್ತಿಸಿಕೊಂಡವರು. ಇವರು ಜನಪರ ಸಂಘಟನೆಗಳಿಗೆ ನೇರವಾಗಿ ಪರಿಚಯಗೊಂಡಿದ್ದು ಸ್ನಾತಕೋತ್ತರ ಪದವಿಯಲ್ಲಿ. ಪ್ರಗತಿಶೀಲ ಪಂಥದ ಬಸವರಾಜ ಕಟ್ಟೀಮನಿ ಹಾಗೂ ಸ್ನೇಹಿತರಾಗಿದ್ದ ಕಮ್ಯೂನಿಸ್ಟ್ ಪಾರ್ಟಿಯ ಸಿದ್ದನಗೌಡ ಪಾಟೀಲ, ರೈತ ಮುಖಂಡರಾದ ಸುಂದರೇಶ್‌ರವರಂತಹ ಎಡಪಂಥಿಯರ ವಿಚಾರಧಾರೆಗೆ ಪ್ರಭಾವಗೊಂಡಿದ್ದು ಘಂಟಿಯವರ ಬೌದ್ಧಿಕ ಬೆಳವಣಿಗೆಗೆ ಪೂರಕವಾಗಿತ್ತು. ಹಾಗೂ ಧಾರವಾಡದ ಸಾಹಿತ್ಯಕ, ಸಾಂಸ್ಕೃತಿಕ ವಾತಾವರಣಗಳ ಜೊತೆ ಆತ್ಮೀಯರ ಸೈದ್ಧಾಂತಿಕ ನಿಲುವುಗಳು ಇವರ ಸಾಮಾಜಿಕ ಬದ್ಧತೆಗೆ ಒಂದು ನೆಲೆಯನ್ನು ಒದಗಿಸಿದವು.

ಸ್ನಾತಕೋತ್ತರ ಪದವಿಯನ್ನು ಮುಗಿಸಿದ ನಂತರ ಕೆರೂರಿನ ಖಾಸಗಿ ಪದವಿಪೂರ್ವ ಕಾಲೇಜಿನಲ್ಲಿ ಹಂಗಾಮಿ ಉಪನ್ಯಾಸಕಿಯಾಗಿ ವೃತ್ತಿಜೀವನಕ್ಕೆ ಮೊದಲು ಕಾಲಿಡುತ್ತಾರೆ. ಇಲ್ಲಿ ಇವರು ನಾಲ್ಕು ವರ್ಷ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸಿ ಅನಂತರ ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರಕ್ಕೆ ಪ್ರಾಧ್ಯಾಪಕರಾಗಿ ನೇಮಕಗೊಳ್ಳುತ್ತಾರೆ. ಈ ವಿಶ್ವವಿದ್ಯಾನಿಲಯದಲ್ಲಿದ್ದಾಗಲೇ ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವ ಮೂಲಕ ಹೋರಾಟಕ್ಕೂ ಇಳಿಯುತ್ತಾರೆ. ಇದೇ ಸಂದರ್ಭದಲ್ಲಿ ಗುಲ್ಬರ್ಗಾ ವಿಶ್ವವಿದ್ಯಾನಿಲಯದಲ್ಲಿ ಹಂತಹಂತವಾಗಿ ಉನ್ನತ ಹುದ್ದೆಗಳಲ್ಲಿ ಬೆಳೆಯುತ್ತಾ ಬಂದರು.

ದನಕಾಯ್ದದ್ದು, ಹೊಲಕ್ಕೆ ಹೋದದ್ದು, ಜೋಳ ಮಾರಿದ್ದು ಬದುಕಿನ ಪಾಠಗಳೆಂದು ಸ್ವೀಕರಿಸಿ ಬೆಳೆದ ಮಲ್ಲಿಕಾಘಂಟಿಯವರ ಬದುಕು ಈಗ ಇತಿಹಾಸವಾಗಿದೆ. ಜೋಳ ಮಾರಿ

ಮನೆಯನ್ನು ನಿರ್ವಹಣೆ ಮಾಡುತ್ತಿದ್ದ ಇವರ ಅಜ್ಜಿ ಯಮನವ್ವ ಇವರಿಗೆ ಸ್ಫೂರ್ತಿ. ಘಂಟಿಯವರು ಇಂದಿಗೂ ತಮ್ಮ ಬದುಕು ಚಿಂತನೆಯಲ್ಲಿ ಗ್ರಾಮೀಣ ಸೊಗಡನ್ನು ಇರಿಸಿಕೊಂಡಿದ್ದಾರೆ. ಇದನ್ನು ಅವರ ಸೃಜನಶೀಲ ಕೃತಿಗಳಲ್ಲಿ ಕಾಣಬಹುದು.

**ಕೃತಿಗಳು**

ಮಲ್ಲಿಕಾ ಘಂಟಿಯವರು ಈವರೆಗೆ ಹತ್ತು ಹಲವು ಮೌಲಿಕ ಕೃತಿಗಳನ್ನು ಹೊರತಂದಿದ್ದಾರೆ. ಅವುಗಳೆಂದರೆ:

**೧. ತುಳಿಯದಿರಿ ನನ್ನ (ಕವನ ಸಂಕಲನ)**
**೨. ಈ ಹೆಣ್ಣುಗಳೇ ಹೀಗೆ (ಕವನ ಸಂಕಲನ)**
**೩. ರೊಟ್ಟಿ ಮತ್ತು ಹುಡುಗಿ (ಕವನ ಸಂಕಲನ)**
**೪. ಬೆಲ್ಲದಚ್ಚು ಮತ್ತು ಇರುವೆ ದಂಡು (ಕವನ ಸಂಕಲನ)**
**೫. ಚಾಜ (ನಾಟಕ)**
**೬. ಒಂದು ಬಾವಿಯ ಸುತ್ತ (ಅಪ್ರಕಟಿತ ನಾಟಕ)**
**೭. ದಫನ್ (ಅಪ್ರಕಟಿತ ನಾಟಕ)**
**೮. ತನು ಕರಗದವರಲ್ಲಿ (ವಿಮರ್ಶಾ ಸಂಕಲನ)**
**೯. ಒಳಗೆ ಸತ್ತು ಹೊರಗೆ (ವಿಮರ್ಶಾ ಸಂಕಲನ)**
**೧೦. ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ (ಪಿಹೆಚ್.ಡಿ. ಮಹಾಪ್ರಬಂಧ)**
**೧೧. ಅಹಲ್ಯಾಬಾಯಿ ಹೋಳ್ಕರ್ (ಜೀವನಚರಿತ್ರೆ)**
**೧೨. ಇಟಗಿ ಭೀಮಾಂಬಿಕೆ (ಜೀವನ ಚರಿತ್ರೆ)**
**೧೩. ಸಂಗೊಳ್ಳಿ ರಾಯಣ್ಣ (ಜೀವನ ಚರಿತ್ರೆ)**
**೧೪. ಬದುಕು ಭಾವಗೀತೆಯಲ್ಲಿ ಭಾಗ ೧ (ಅಪ್ರಕಟಿತ ಆತ್ಮಚರಿತ್ರೆ)**
**೧೫. ಕನ್ನಡದಲ್ಲಿ ಕತೆಗಾರ್ತಿಯರು (ಸಂಪಾದನೆ)**

ಹೀಗೆ ಸೃಜನ ಹಾಗೂ ಸೃಜನೇತರ ಸಾಹಿತ್ಯ ಕೃತಿಗಳನ್ನು ರಚಿಸಿ ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸುತ್ತಿದ್ದಾರೆ. ಅಲ್ಲದೆ ಹಲವು ಕೃತಿಗಳನ್ನು ಸಾಮಾಜಿಕಬದ್ಧತೆಯ ನೆಲೆಯಲ್ಲಿ ಸಂಪಾದಿಸಿರುವುದು ವಿಶೇಷ.

**ಗೌರವ ಪುರಸ್ಕಾರಗಳು**

ಮಲ್ಲಿಕಾಘಂಟಿಯವರಿಗೆ ಅವರ ಸೇವೆಯನ್ನು ಗುರ್ತಿಸಿ ಹಲವು ಪ್ರತಿಷ್ಠಿತ ಪ್ರಶಸ್ತಿಗಳು ಗೌರವ ಸನ್ಮಾನಗಳು ಹುಡುಕಿಕೊಂಡು ಬಂದಿವೆ. ಅವುಗಳೆಂದರೆ:

೧. ಸುಧಾಮೂರ್ತಿ ಪ್ರಶಸ್ತಿ ೧೯೯೯
೨. ರತ್ನಮ್ಮ ಹೆಗಡೆ ಪ್ರಶಸ್ತಿ ೧೯೯೯
೩. ಕಾವ್ಯಾನಂದ ಪ್ರಶಸ್ತಿ ೧೯೯೯
೪. ವಿಶ್ವೇಶ್ವರಯ್ಯ ಪ್ರಶಸ್ತಿ ೨೦೦೦
೫. ಸಿಂಧೂರ ದತ್ತಿನಿಧಿ ಪ್ರಶಸ್ತಿ ೨೦೦೦
೬. ಮಾತೋಶ್ರೀ ಮಾಣಿಕಬಾಯಿ ಪಾಟೀಲ ಪ್ರಶಸ್ತಿ ೨೦೦೦
೭. ಲಿಂಗರಾಜ ಪ್ರತಿಷ್ಠಾನ ಪ್ರಶಸ್ತಿ ೨೦೦೦
೮. ೭೮ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ಗೌರವ ಸನ್ಮಾನ – ಗಂಗಾವತಿಯಲ್ಲಿ
೯. ಪಬ್ಲಿಕ್‌ರಿಲೇಷನ್ ಕೌನ್ಸಿಲ್ ಆಫ್ ಇಂಡಿಯಾ ಬೆಂಗಳೂರು – ಗೌರವ ಪ್ರಶಸ್ತಿ ೨೦೧೧.
೧೦. ಬೈಂದೂರು ಪ್ರತಿಷ್ಠಾನ – ೨೦೦೧
೧೧. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ೨೦೧೩
೧೨. ಸಪ್ನ ಬುಕ್ ಹೌಸ್ ರಾಜ್ಯೋತ್ಸವ ಪ್ರಶಸ್ತಿ ೨೦೧೪.
೧೩. ಶಿವಮೊಗ್ಗ ಜಿಲ್ಲಾ ದಸರಾ ಪ್ರಶಸ್ತಿ ೨೦೧೪
೧೪. ಗೊರೂರು ಪ್ರಶಸ್ತಿ
೧೫. ಲಲಿತಾದೇವಿ ಗುರುಸಿದ್ಧಪ್ಪ ಸಿಂಧೂರ ದತ್ತಿ ಪ್ರಶಸ್ತಿ
೧೬. ಗುಲ್ಬರ್ಗಾ ವಿಶ್ವವಿದ್ಯಾನಿಲಯದ 'ರಾಜ್ಯೋತ್ಸವ ಪ್ರಶಸ್ತಿ'

ಇವಲ್ಲದೆ ಇನ್ನೂ ಹತ್ತಾರು ಪ್ರಶಸ್ತಿ, ಪುರಸ್ಕಾರಗಳು ಮಲ್ಲಿಕಾ ಘಂಟಿಯವರ ಸಾಹಿತ್ಯ ಸೇವೆಯ ಮುಡಿಗೇರಿವೆ.

ಪ್ರಗತಿಪರ ಚಿಂತಕಿಯಾಗಿರುವ ಮಲ್ಲಿಕಾ ಘಂಟಿಯವರು ಕನ್ನಡದ ಮಹಿಳಾ ಬರಹಗಾರರಲ್ಲಿ ಪ್ರಮುಖರಾಗಿದ್ದಾರೆ. ಇವರು ಸೃಜನಶೀಲ ಸಾಹಿತ್ಯ ಪ್ರಕಾರವಾದ ಕಾವ್ಯ, ನಾಟಕ ಕಥೆ ಹಾಗೂ ಸೃಜನೇತರ ಸಾಹಿತ್ಯ ಪ್ರಕಾರವಾದ ವಿಮರ್ಶೆ, ಜೀವನಚರಿತ್ರೆ, ಸಂಪಾದಿತ ಕೃತಿಗಳು ಹೀಗೆ ಹಲವು ಕ್ಷೇತ್ರಗಳಲ್ಲಿ ದುಡಿದಿದ್ದಾರೆ.

ಮಹಿಳಾಪರ ಚಿಂತಕಿಯಾಗಿರುವ ಘಂಟಿಯವರು ಸಾಹಿತ್ಯದಲ್ಲಿ ತಮ್ಮದೇ ಆದ ಅನನ್ಯ ಸ್ಥಾನ ಪಡೆದಿದ್ದಾರೆ. ವೈಜ್ಞಾನಿಕ ಹಾಗೂ ವೈಚಾರಿಕ ದೃಷ್ಟಿಕೋನ, ಪ್ರಗತಿಪರ ಧೋರಣೆ, ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವ ರೀತಿ ಅವರಿಗೆ ಸಾಹಿತ್ಯದಲ್ಲಿ ಹೆಸರನ್ನು ತಂದುಕೊಟ್ಟಿದೆ. ಆದ್ದರಿಂದ ಮಲ್ಲಿಕಾ ಘಂಟಿಯವರನ್ನು ಬರಿಯ ಕವಿಯೆಂದೋ,

ನಾಟಕಕಾರ್ತಿಯೆಂದೋ, ವಿಮರ್ಶಕಿಯೆಂದೋ, ಗುರುತಿಸುವುದು ಕಷ್ಟ. ಇವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೆಲಸ ಮಾಡಿರುವುದರಿಂದ ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಬರಹಗಾರ್ತಿಯೆಂದು ಗುರುತಿಸಬಹುದಾಗಿದೆ.

ತಮ್ಮ ವೈಯಕ್ತಿಕ ಬದುಕು ಹಾಗೂ ಸಾಮಾಜಿಕ ಬದ್ಧತೆಯ ನಡುವೆಯೂ, ಸಾಹಿತ್ಯ ರಚನೆಯಲ್ಲಿ ತೊಡಗಿರುವ ಮಲ್ಲಿಕಾ ಘಂಟಿ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿದ್ದ ಸಂದರ್ಭದಲ್ಲಿಯೇ ಕಥೆ, ಕವನ, ನಾಟಕಗಳನ್ನು ಬರೆದು ಪ್ರಕಟಿಸುತ್ತಾರೆ. ಬದುಕಿನ ನೆಮ್ಮದಿಗೆ ಬರಹ ಅವಶ್ಯವೆಂದು ನಂಬಿಕೊಂಡಿರುವ ಇವರು 'ತುಳಿಯದಿರಿ ನನ್ನ', 'ಈ ಹೆಣ್ಣುಗಳೇ ಹೀಗೆ', 'ರೊಟ್ಟಿ ಮತ್ತು ಹುಡುಗಿ', 'ಬೆಲ್ಲದಚ್ಚು ಮತ್ತು ಇರುವೆ ದಂಡು' ಎಂಬ ಕವನಸಂಕಲನಗಳನ್ನು, 'ಚಾಜ', 'ಒಂದು ಬಾವಿಯ ಸುತ್ತ', 'ದಫನ್' ಎಂಬ ನಾಟಕಗಳನ್ನು ಬರೆದಿದ್ದಾರೆ.

"ಸಮಾಜವಾದಿ ರಾಷ್ಟ್ರಗಳಲ್ಲಿ ಪ್ರತಿಯೊಬ್ಬರು ಸಮಾನರು"[3] ಎಂದು ತಮ್ಮ ಚೊಚ್ಚಲ ಕೃತಿ 'ತುಳಿಯದಿರಿ ನನ್ನ' ಕವನ ಸಂಕಲನದಲ್ಲಿ ತಿಳಿಸುವ ಮಲ್ಲಿಕಾರವರು ಬಡವರ, ದೀನ-ದಲಿತರ ಸಂಕಷ್ಟಗಳಿಗೆ ಮೊಸಳೆ ಕಣ್ಣೀರು ಸುರಿಸುವವರನ್ನು, ವೇಷಧಾರಿಗಳನ್ನು ತಿವಿದಿದ್ದಾರೆ.

'ಈ ಹೆಣ್ಣುಗಳೇ ಹೀಗೆ' ಸಂಕಲನವು ಚುಟುಕುಗಳ ರೂಪದಲ್ಲಿದೆ. ಮಹಿಳೆಯ ಅತಂತ್ರ ಅಥವಾ ಪರತಂತ್ರ ಜೀವನವನ್ನು ಚಿತ್ರಿಸುವ ಮೂಲಕ ಬಿಸಿಯನ್ನು ತಟ್ಟಿಸುವ ಕಾವಿನಿಂದ ಕೂಡಿದೆ. ಇವರ 'ಬೆಲ್ಲದಚ್ಚು ಮತ್ತು ಇರುವೆ ದಂಡು' ಕೃತಿಯು ಲೋಕದ ಜೊತೆಗೆ ತಕರಾರು ತೆಗೆದವು ಮತ್ತು ನ್ಯಾಯಾಲಯದಲ್ಲಿ ನ್ಯಾಯತಕ್ಕಡಿಯಿಂದ ಸಾಮಾಜಿಕ ನ್ಯಾಯವನ್ನು ಬೇಡುವ ಇರಾದೆಯಿಂದ ಹುಟ್ಟಿದ ಕವಿತೆಗಳಾಗಿವೆ. 'ರೊಟ್ಟಿ ಮತ್ತು ಹುಡುಗಿ' ಕವನ ಸಂಕಲನದಲ್ಲಿ ಹಸಿವು ಮತ್ತು ಪ್ರೀತಿಯನ್ನು ಕುರಿತು ಬರೆದ ಕವನಗಳು ಹೆಣ್ಣಿಗೆ ಪ್ರೀತಿ ನಿರಂತರ ಹಸಿವಾಗಿ ಕಾಡುತ್ತದೆ ಎಂಬ ವಿಷಯಗಳನ್ನೊಳಗೊಂಡ ಕವಿತಾ ಸಂಕಲನವಾಗಿದೆ.

ನಾಟಕ ರಚನೆಯಲ್ಲಿ ತೊಡಗಿದ ಮಹಿಳೆಯರು ವಿರಳ. ಜನಪರ ಆಶಯವನ್ನೊಂದಿರುವ 'ಚಾಜ' ನಾಟಕ ಉತ್ತರ ಕರ್ನಾಟಕದ ಅನಿಷ್ಟ ಪದ್ಧತಿಯನ್ನು ಕೇಂದ್ರವಾಗಿಟ್ಟುಕೊಂಡು ಊಳಿಗಮಾನ್ಯ ವ್ಯವಸ್ಥೆಯನ್ನು ಪ್ರಶ್ನಿಸುತ್ತದೆ. 'ದಫನ್' ನಾಟಕ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕುರಿತು ಬರೆದ ನಾಟಕವಾಗಿದೆ. ಯಾವುದೇ ಸಂದರ್ಭದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಆಂಶಿಕವಾಗಿ ಹರಣಮಾಡಬಹುದು; ಆದರೆ ಅದರ ಮೂಲವನ್ನು ಕಿತ್ತುಕೊಳ್ಳಲು ಆಗುವುದಿಲ್ಲ ಎಂಬುದನ್ನು ತಿಳಿಸುತ್ತದೆ.

ಘಂಟಿಯವರ 'ತನು ಕರಗದವರಲ್ಲಿ' ಸ್ತ್ರೀವಾದಿ ಹಿನ್ನೆಲೆಯಲ್ಲಿ ಮೂಡಿಬಂದ ವಿಮರ್ಶಾ ಕೃತಿಯಾಗಿದ್ದು ಆಳವಾದ ಚಿಂತನೆಯನ್ನೊಳಗೊಂಡಿದೆ. ಪ್ರಸ್ತುತ ರಾಜಕಾರಣದಲ್ಲಿ

ಮಹಿಳೆ ಎದುರಿಸುತ್ತಿರುವ ಆತಂಕ ಹಾಗೂ ವಚನ ಸಾಹಿತ್ಯವನ್ನು ಕುರಿತ ಒಳನೋಟವಿದೆ. ಇವರ 'ಧರಣಿಯ ಮೇಲೊಂದು' ಕೃತಿಯು ವಚನಕಾರರ ಬಗ್ಗೆ, ದಾಸಸಾಹಿತ್ಯದ ಬಗ್ಗೆ, ಕನಕನ ಬಗ್ಗೆ, ಪಂಪನ ಬಗ್ಗೆ ವಿವೇಕಪೂರ್ಣವಾಗಿ ಬರೆದ ವಿಮರ್ಶೆಯಾಗಿದೆ.

'ಅಹಲ್ಯಾಬಾಯಿ ಹೋಳ್ಕರ್' ಎಂಬ ಅಜ್ಞಾತ ಚಾರಿತ್ರಿಕ ಮಹಿಳೆಯ ಬದುಕನ್ನು ಕುರಿತು ಜೀವನ ಚರಿತ್ರೆಯನ್ನು ಬರೆದಿರುವ ಮಲ್ಲಿಕಾರವರು ಮರಾಠರ ಕಾಲದ ಅನೇಕ ಐತಿಹಾಸಿಕ ವಿಚಾರಗಳನ್ನು ಕುರಿತು ತಿಳಿಸುತ್ತಾರೆ. ಜೊತೆಗೆ 'ಇಟಗಿ ಭೀಮಾಂಬಿಕಾ' ಹಾಗೂ 'ಸಂಗೊಳ್ಳಿ ರಾಯಣ್ಣ' ಎಂಬ ಜೀವನ ಚರಿತ್ರೆಗಳು ಮನುಷ್ಯ ವ್ಯಕ್ತಿತ್ವದ ಎರಡು ವಿಭಿನ್ನ ಮಗ್ಗುಲುಗಳನ್ನು ಪರಿಚಯಿಸುತ್ತವೆ.

ವೈದಿಕರು ಸಮಾಜ ಸುಧಾರಕರಾಗಿ ಮತಗಳನ್ನು ಸ್ಥಾಪಿಸಿರಬಹುದು. ಆದರೆ ಯಾವೊಬ್ಬ ಶೂದ್ರನನ್ನು ಗುರುಪರಂಪರೆಯೊಳಗೆ ಬಿಟ್ಟುಕೊಂಡ ನಿದರ್ಶನಗಳಿಲ್ಲ. ಇದಕ್ಕೆ ಅಪವಾದದ್ದು ವ್ಯಾಸ-ಕನಕರ ಸಂಬಂಧ. ಇದಕ್ಕೂ ಕಾರಣಗಳು ವಿಭಿನ್ನ ನೆಲೆಗಳಲ್ಲಿವೆ. ಇದನ್ನು ಕುರಿತ ಚರ್ಚೆಯು ಕನಕದಾಸರನ್ನು ಬಹುಮುಖಿ ನೋಟಗಳಿಂದ ಗ್ರಹಿಸುವ 'ತನುವ ನೇಗಿಲ ಮಾಡಿ' ಕೃತಿಯಲ್ಲಿ ಕಂಡುಬರುತ್ತದೆ. ಇವರ 'ಕನ್ನಡ ಸಾಹಿತ್ಯ ಮತ್ತು ಮಹಿಳೆ' ಕೃತಿಯು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಹೊರನಾಡಿನ ಕನ್ನಡಿಗರ ಸಹಭಾಗಿತ್ವದಲ್ಲಿ ನಡೆಸಿದ ಕಾರ್ಯಕ್ರಮದಲ್ಲಿ ವಿವಿಧ ಗೋಷ್ಠಿಗಳಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನವಾಗಿದೆ. "ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ" ಕೃತಿಯು ಮಲ್ಲಿಕಾಘಂಟಿಯವರ ಪಿಹೆಚ್.ಡಿ. ಮಹಾಪ್ರಬಂಧವಾಗಿದ್ದು, ಇದು ೧೯೨೦ರಿಂದ ೧೯೮೫ರಲ್ಲಿ ಪ್ರಕಟವಾದ ಕಥೆಗಳನ್ನು ಅಧ್ಯಯನ ಮಾಡಿ ಬರೆದ ಸಂಶೋಧನಾ ಕೃತಿಯಾಗಿದೆ.

ಹೀಗೆ ಅನೇಕ ಮೌಲಿಕ ಕೃತಿಗಳನ್ನು ಪ್ರಕಟಿಸುವ ಮೂಲಕ ಸೈದ್ಧಾಂತಿಕ ಬದ್ಧತೆಯನ್ನು ಬಿಟ್ಟುಕೊಡದೆ, ಪ್ರಗತಿಪರ ಆಲೋಚನೆಗಳ ಮೂಲಕ ಗಂಭೀರ ವಿಷಯಗಳನ್ನು ಚರ್ಚಿಸಿದ್ದಾರೆ.

ಇವರು ಜೀವನಪರ ಹಾಗೂ ವಸ್ತುನಿಷ್ಠ ಬರಹಗಾರರು. ವಸ್ತು, ಭಾಷೆ, ತಂತ್ರಗಳನ್ನು ತಮ್ಮ ಸಾಹಿತ್ಯದಲ್ಲಿ ವಿಶಿಷ್ಟವಾಗಿ ಬಳಸಿಕೊಳ್ಳುವ ಘಂಟಿ ಹೆಣ್ಣನ್ನು ಪ್ರಧಾನ ನೆಲೆಯಲ್ಲಿಟ್ಟು ಅವಳಿಗಾದ ಶೋಷಣೆಯ ವಿವಿಧ ಮುಖಗಳನ್ನು ಸಮಾಜಕ್ಕೆ ತೆರೆದಿಡುವ ಇವರ ಧೈರ್ಯವನ್ನು ಯಾರೇ ಆದರೂ ಮೆಚ್ಚಲೇಬೇಕು. ಮಹಿಳಾ ಸಬಲೀಕರಣಕ್ಕೆ ಹೋರಾಟ ಮಾಡುವ ಇವರು ಹೆಣ್ಣಾಗಿ ಹುಟ್ಟಿದ್ದಕ್ಕೆ ಹೆಮ್ಮೆಪಡುತ್ತೇನೆ ಎನ್ನುತ್ತಾರೆ:

ನಿನ್ನ ಭಾವನೆಗಳಿಗೆ ಕೊಳ್ಳಿಯಿಡುವ ಪ್ರಸಂಗಗಳೆದುರಾದಾಗ

ಬದುಕುವುದು ಅನಿವಾರ್ಯವೆಂದು
ನನ್ನಂತೆ ನೀ ಒಪ್ಪಂದ ಮಾಡಿಕೊಳ್ಳದಿರು
ನನ್ನಿತಿಹಾಸ ನೀ ಮರೆತರೆ
ಹೊಸ ಇತಿಹಾಸ ನೀ ಬರೆಯುವುದೆಂತು?

ಹೀಗೆ ಪುರುಷ ವ್ಯಾಪ್ರತೆಯನ್ನು ಮನಗಂಡಿರುವ ಘಂಟಿಯವರು ದ್ವೇಷಕ್ಕೆ, ಸಂಘರ್ಷಕ್ಕೆ ಸೈದ್ಧಾಂತಿಕ ನೆಲೆಗಟ್ಟನ್ನು ಕಲ್ಪಿಸುತ್ತಾರೆ.

ಮಹಿಳೆಯರ, ಶೋಷಿತರ, ಹಿಂದುಳಿದವರ ಬಗ್ಗೆ ಕಾಳಜಿಯನ್ನಿಟ್ಟುಕೊಂಡಿರುವ ಇವರು ಈ ಸಮಾಜದ ಅವ್ಯವಸ್ಥೆಗಳನ್ನು ಆತಂಕದಿಂದಲೇ ನೋಡುತ್ತಾ, ನೇರವಾಗಿ, ಖಾರವಾಗಿ ಮಾತನಾಡುತ್ತಾರೆ. ಇವರು ಸಾಹಿತ್ಯ ಹಾಗೂ ಬದುಕಿನಲ್ಲಿ ಎಂದಿಗೂ ರಾಜಿಯಾಗುವುದಿಲ್ಲ. ಸಾಮಾಜಿಕ ನ್ಯಾಯಕ್ಕೆ ಕುತ್ತು ಬಂದಾಗಲಂತೂ ಬಹಳ ತೀಕ್ಷ್ಣವಾಗಿ ಮಾತನಾಡುವ ಇವರು ಕೇವಲ ಬರಹಗಾರ್ತಿಯಾಗಿರದೆ, ಒಬ್ಬ ಜವಾಬ್ದಾರಿಯನ್ನು ಹೊತ್ತ ನಾಗರಿಕರು ಆಗಿದ್ದಾರೆ. ಮಲ್ಲಿಕಾರವರೆ ಹೇಳುವಂತೆ, "ಬರೆಯುವುದನ್ನು ಕೈಗೂಲಿಯೆಂದು ಭಾವಿಸಿಲ್ಲ. ಅದೊಂದು ಜವಾಬ್ದಾರಿ ಕಾಯಕವೆಂದುಕೊಂಡಿರುವೆ. ಬರೆಯುವ ಒತ್ತಡ ತೀವ್ರಗೊಂಡಾಗ ಬರೆಯುವೆ, ಅದಕ್ಕಿಂತಲೂ ತೀವ್ರಗತಿಯಲ್ಲಿ ಬದುಕಿಗೆ ಚಾಚಿಕೊಳ್ಳುವೆ"[೬] ಬರಹವನ್ನು ಗಂಭೀರವಾದ ಕಾಯಕವೆಂದು ಸ್ವೀಕರಿಸಿರುವ ಇವರು ಸ್ತ್ರೀವಾದಿ ಚಿಂತಕಿಯರಲ್ಲಿ ಈ ಕಾರಣದಿಂದಾಗಿ ಬಹಳ ಮುಖ್ಯರಾಗುತ್ತಾರೆ.

ಮಹಿಳೆಯರ ಹಿಂದುಳಿದವರ ಬಗ್ಗೆ ಚಿಂತಿಸುವ ಇವರು ಅನ್ಯಾಯ ಕಂಡುಬಂದಲ್ಲಿ ನಿಷ್ಠುರವಾಗಿ ಧ್ವನಿ ಎತ್ತಿ ಆ ಮೂಲಕ ಅನೇಕರ ಬಾಳಿನಲ್ಲಿ ಬೆಳಕಾಗಿದ್ದಾರೆ. ಇವರ ಬದುಕು ಹಾಗೂ ಬರಹ ಒಂದೇ ಆಗಿದ್ದು, ಬದುಕಿದಂತೆ ಬರೆಯುವ, ಬರೆದಂತೆ ಬದುಕುವ ಇವರು ಅನೇಕ ವಿದ್ಯಾರ್ಥಿಗಳಿಗೆ ಮಾದರಿಯಾಗಿದ್ದು, ಮಾರ್ಗದರ್ಶಕರೂ ಆಗಿದ್ದು, ತಮ್ಮ ಮಗ ಅಮಿತ್‌ಗೆ ಇವರೆ ಮಾದರಿ ಹಾಗೂ ಮಾರ್ಗದರ್ಶಕರಾಗಿ ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಇಂಗ್ಲಿಷ್ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಕೊಡಿಸಿ ಈಗ ನವದೆಹಲಿಯಲ್ಲಿ ಐ.ಎ.ಎಸ್. ತರಬೇತಿಗೆ ಕಳುಹಿಸಿದ್ದಾರೆ.

**ವಿಶೇಷ ಸಾಮಾಜಿಕ ಸೇವೆ**

೧. "ಕುಮಾರಸ್ವಾಮಿ ದೇವಾಲಯಕ್ಕೆ ಮಹಿಳೆಯರ ಪ್ರವೇಶ ಪಡೆದದ್ದು".

ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಅತ್ಯಂತ ಪುರಾತನವಾದ, ಇತಿಹಾಸ ಪ್ರಸಿದ್ಧವಾದ ಶ್ರೀ ಕುಮಾರಸ್ವಾಮಿ ದೇವಾಲಯಕ್ಕೆ ಮಹಿಳೆಯರ ಪ್ರವೇಶವನ್ನು ನಿರಾಕರಿಸಲಾಗಿತ್ತು. ಇದನ್ನು ಹಾಸನದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ

ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಭಾಗವಹಿಸಿ ಈ ವಿಷಯ ಕುರಿತು ಪ್ರಶ್ನಿಸಿ ಪ್ರತಿಭಟಿಸಿದ್ದಕ್ಕಾಗಿ ಮಹಿಳೆಯರಿಗೆ ದೇವಾಲಯದ ಪ್ರವೇಶದ ಮುಕ್ತ ಅವಕಾಶ ದೊರೆಯಿತು".[೭]

೨. "ಸಂಡೂರು ನಗರದ ಪ್ರಸಿದ್ಧ ಊರಮ್ಮನ ಜಾತ್ರೆಯಲ್ಲಿ ಕೋಣ ಬಲಿಕೊಡುವುದನ್ನು ವಿರೋಧಿಸಿದ್ದಕ್ಕಾಗಿ ಸನ್ಮಾನ್ಯ ದಿ. ಎಂ.ವೈ.ಘೋರ್ಪಡೆ ಯವರು ಕೋಣ ಬಲಿಯನ್ನು ನಿಲ್ಲಿಸುವುದರ ಮೂಲಕ ಪ್ರಾಣಿ ಹಿಂಸೆಯ ಪ್ರಕರಣಕ್ಕೆ ಸುಖಾಂತ್ಯವನ್ನು ನೀಡಿದರು".[೮]

೩. "ಗದುಗಿನಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾಗೋಷ್ಠಿಯ ಆಶಯಪರ ಮಾತುಗಳನ್ನಾಡುತ್ತಾ ಪೊಲೀಸ್ ಅಧಿಕಾರಿಗಳು ಸಾಹಿತಿಗಳ ಜೊತೆ ಮತ್ತು ಸಾಹಿತ್ಯ ಸಮ್ಮೇಳನದಲ್ಲಿ ಕರ್ತವ್ಯ ನಿಭಾಯಿಸುವ ಕುರಿತು ಮಾತನಾಡಿದ್ದರ ಪರಿಣಾಮವಾಗಿ, ಕರ್ನಾಟಕ ಸರ್ಕಾರದ ಗೃಹಸಚಿವರು ಗಂಗಾವತಿಯಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಉಸ್ತುವಾರಿಗೆ ಪೊಲೀಸ್ ಸಿಬ್ಬಂದಿಯನ್ನು ನೇಮಿಸುವಾಗ ಅವರಿಗೆ ಸಾರ್ವಜನಿಕರ ಜೊತೆಗೆ ಮತ್ತು ಸಾಹಿತಿಗಳ ಜೊತೆಗೆ ಹೇಗೆ ವರ್ತಿಸಬೇಕು ಎಂಬುದರ ಕುರಿತು ತರಬೇತಿ ನೀಡಲು ಸುತ್ತೋಲೆ ಹೊರಡಿಸಿದರು".[೯]

ಹೀಗೆ ಅಂತಃಕರಣದಿಂದ ಸೇವೆ ಮಾಡುವವರು, ಬರೆಯುವವರು, ಮಾತನಾಡುವವರು, ಚಿಂತಿಸುವವರು ಮಲ್ಲಿಕಾ ಘಂಟಿ.

ಅದಮ್ಯ ಜೀವನೋತ್ಸಾಹದಿಂದ ವೃತ್ತಿ ಜೀವನವನ್ನಾರಂಭಿಸಿದ ಮಲ್ಲಿಕಾ ಘಂಟಿಯವರು ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ಹಂತಹಂತವಾಗಿ ಬೆಳೆದು ಪ್ರಸ್ತುತ ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾಲಯದಲ್ಲಿ ಕುಲಸಚಿವರಾಗಿ ವಿಶ್ವವಿದ್ಯಾಲಯದ ಉನ್ನತ ಪದವಿಗೇರಿ ಹಲವು ಪ್ರಗತಿಶೀಲ ಕಾರ್ಯಗಳನ್ನು ಮಾಡುತ್ತಿದ್ದಾರೆ. ಸಾಮಾನ್ಯ ಹೆಣ್ಣು ಮಗಳಾಗಿ ಓದಿಗೆ ಪ್ರೋತ್ಸಾಹವನ್ನೇ ಕೊಡದಿದ್ದ ಮನೆಯಲ್ಲಿ ಹುಟ್ಟಿ ಬೆಳೆದ ಮಲ್ಲವ್ವ ಇಂದು ವಿಶ್ವವಿದ್ಯಾಲಯ ಮಟ್ಟದ ಕುಲಸಚಿವರಾಗುವ ಮೂಲಕ ಮಲ್ಲಿಕಾ ಘಂಟಿ ಆಗಿ ಬೆಳೆದದ್ದು ಬಹುದೊಡ್ಡ ಸಾಧನೆ. ಇತರ ಹೆಣ್ಣುಮಕ್ಕಳಿಗೆ ಆದರ್ಶ ಇವರ ಜೀವನ.

ಮಲ್ಲಿಕಾ ಘಂಟಿಯವರು ಮನುಷ್ಯರ ವಿವೇಕವನ್ನು, ಅಂತಃಕರಣವನ್ನು ಮಾನವೀಯ ಮನೋಧರ್ಮವನ್ನು ಬೆಳೆಸಬೇಕೆಂಬ ಉತ್ಕಟಭಾವದೊಂದಿಗೆ ಬರೆಯುತ್ತಿರುವ ಓರ್ವ ಮಹತ್ವಪೂರ್ಣ ಲೇಖಕಿ. ಬದುಕಿನ ಅನುಭವಗಳನ್ನು ತುಡಿತ–ಮಿಡಿತಗಳನ್ನು ಕಾವ್ಯದಲ್ಲಿ ಕಟ್ಟಿಕೊಡುತ್ತಾರೆ. ಬಾಲ್ಯದಿಂದ ಕಂಡುಂಡ ಅನುಭವಗಳನ್ನು, ನೋವು–ನಲಿವುಗಳನ್ನು, ತಮ್ಮ ಕವಿತೆಗಳ ಮೂಲಕ ಅಭಿವ್ಯಕ್ತಪಡಿಸುತ್ತಾರೆ. ಇವರೋರ್ವ ಅಂತಃಕರಣದ ಕವಿ. ಇವರ

ಸಾಹಿತ್ಯ ನಿರ್ಮಿತಿ ದಂತಗೋಪುರದಲ್ಲಿ ಕುಳಿತು ಮನಸ್ಸಿಗೆ ಬಂದದ್ದನ್ನು ಗೀಚುವ ಚಟದ್ದಲ್ಲ. ಬದುಕನ್ನು ಆಳವಾಗಿ ಪ್ರೀತಿಸಿ ಬರೆದಂತಹದ್ದು. ಇವರು ತಮ್ಮ ಮನಸ್ಸನ್ನು ಕಲಕುವ, ಹೃದಯಸ್ಪರ್ಶಿ ಸಂಗತಿಗಳನ್ನು ತಮ್ಮ ಅಂತರಾಳಕ್ಕೆ ತಂದುಕೊಂಡು, ಹೃದಯತುಂಬಿ ಚೆನ್ನಾಗಿ ಹದಗೊಳಿಸಿದ ಅನಂತರವಷ್ಟೇ ಕವಿತೆಯಾಗಿಸುವ ಕಲಾವಂತಿಕೆ, ಕಾವ್ಯಶೈಲಿ ಇವರಿಗೆ ಸಿದ್ಧಿಸಿದೆ. ಇವರ ಕಾವ್ಯ ಕತ್ತಲೆಯ ಗರ್ಭವನ್ನು ಸೀಳಿ ಬೆಳಕು ನೀಡುವ ಆಕಾಂಕ್ಷೆಯನ್ನು ವ್ಯಕ್ತಪಡಿಸುವಂತಹದ್ದು.

## ಕೊನೆಟಿಪ್ಪಣಿಗಳು

೧. ಕಾಯಕ ವಿಭೂತಿ, ವೆಂಕಟಗಿರಿ ದಳವಾಯಿ, ಸಂ. ಭೈರವಮೂರ್ತಿ.ಕೆ, ೨೦೦೮, ಪು. ೮೦೦-೮೦೧
೨. ಅದೇ, ಪು. ೮೦೧
೩. ಅದೇ, ಪು. ೮೦೩
೪. ಅದೇ, ಪು. ೮೦೧
೫. ತುಳಿಯದಿರಿ ನನ್ನ : ೧೯೮೬, ಪು. ೩
೬. ನಿಮ್ಮೊಂದಿಗೆ, ರೊಟ್ಟಿ ಮತ್ತು ಹುಡುಗಿ, ೧೯೯೯, ಪು. ೫
೭. ಬದುಕು ಭಾವಗೀತೆಯಲ್ಲಿ ಭಾಗ -೧, ಪು. ೨೨
೮. ಅದೇ, ಪು. ೨೨
೯. ಅದೇ, ಪು. ೨

## ಅಧ್ಯಾಯ ಮೂರು

# ಬಂಡಾಯ ಚಿಂತನೆಯ ಪ್ರಾತಿನಿಧಿಕ ರೂಪವಾದ ಕಾವ್ಯ-ನಾಟಕಗಳ ಅಧ್ಯಯನ

## ಅಧ್ಯಾಯ ಮೂರು

# ಬಂಡಾಯ ಚಿಂತನೆಯ ಪ್ರಾತಿನಿಧಿಕ ರೂಪವಾದ ಕಾವ್ಯ-ನಾಟಕಗಳ ಅಧ್ಯಯನ

ಸಾಹಿತ್ಯ ನಿಂತ ನೀರಲ್ಲ, ನಿರಂತರ ಹರಿಯುವ ತೊರೆಯಂತೆ. ಕಾಲದ ಪ್ರವಾಹಕ್ಕೆ ಸಿಲುಕಿ ಹಲವು ಬದಲಾವಣೆಗಳಿಗೆ ಒಳಗಾಗಿ ಸಮಕಾಲೀನ ಸನ್ನಿವೇಶಗಳಿಗೆ ತುಡಿಯುವುದು ಅದರ ಗುಣಧರ್ಮ. ಕನ್ನಡ ಭಾಷಾ ಸಾಹಿತ್ಯವು ಇದಕ್ಕೆ ಹೊರತಲ್ಲ. ಹಿಂದಿನಿಂದ ಈ ಹೊತ್ತಿನ ತನಕ ಕನ್ನಡ ಸಾಹಿತ್ಯ ವಿಭಿನ್ನ ಆಯಾಮಗಳಲ್ಲಿ ತೆರೆದುಕೊಂಡಿದೆ. ಇದು ನಿರಂತರ ವಿಕಾಸಪಥದಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಜೀವಂತವಾಗಿ ಹರಿಯುತ್ತಿದೆ. ಸಾಹಿತ್ಯವು ಮಾನವೀಯತೆಯ ದಿವ್ಯೋಜ್ವಲ ದೀಪವಿದ್ದಂತೆ. ಇದು ಜೀವ ಪ್ರೇಮಿಯಾದುದು. ದಿನನಿತ್ಯದ ಆಗುಹೋಗುಗಳ ಕಡೆಗೆ ತುಡಿಯುವ ಚೈತನ್ಯವಾಗಿದೆ. ಸಾಂಸ್ಕೃತಿಕವಾಗಿ ಉನ್ನತಿಯನ್ನು ಸಾಧಿಸುವುದೇ ಇದರ ಮೂಲ ಗುರಿ. ಬಾಹ್ಯಲೋಕದ ಸೌಂದರ್ಯವನ್ನು ಗುರುತಿಸುವಷ್ಟೇ ಅಂತರಂಗದ ಸೌಂದರ್ಯವನ್ನು ಸಾಹಿತ್ಯವು ಗುರುತಿಸುತ್ತದೆ.

ಒಂದೂವರೆ ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವು ವಿವಿಧ ಕಾಲಘಟ್ಟಗಳಲ್ಲಿ ವಿಭಿನ್ನ ನೆಲೆಗಳಲ್ಲಿ ಬೆಳೆಯತ್ತಾ ಬಂದಿದೆ. ಅಂದಿನಿಂದ ಈ ಹೊತ್ತಿನವರೆಗೆ ಹಲವು ಕವಿಗಳು, ಲೇಖಕರು ಕನ್ನಡದಲ್ಲಿ ಕೃತಿ ರಚನೆ ಮಾಡಿ ತಮ್ಮದೇ ಆದ ಸಾಂಸ್ಕೃತಿಕ ಮಹತ್ವವನ್ನು ಮೂಡಿಸಿದ್ದಾರೆ. ವಿಶ್ವಸಾಹಿತ್ಯದಲ್ಲಿ ಕನ್ನಡ ಸಾಹಿತ್ಯವು ತನ್ನದೇ ಆದ ಗೌರವ ಸ್ಥಾನಮಾನವನ್ನು ಗಳಿಸಿಕೊಳ್ಳುವ ಮೂಲಕ ತನ್ನ ಅನನ್ಯತೆಯನ್ನು ಮೆರೆದಿದೆ. ಈ ಸಾಹಿತ್ಯವು ವಿವಿಧ ಕಾಲಘಟ್ಟಗಳಲ್ಲಿ ವಿವಿಧ ಸಾಹಿತ್ಯಿಕ ಪಂಥಗಳಲ್ಲಿ ವಿಕಾಸಹೊಂದುತ್ತಾ ಬಂದಿದೆ. ಅವುಗಳಲ್ಲಿ 'ಬಂಡಾಯ ಸಾಹಿತ್ಯವು' ಬಹಳ ಪ್ರಮುಖವಾದ ಚಳವಳಿಯಾಗಿ ಕಂಡುಬರುತ್ತದೆ.

ಬಂಡಾಯ ಸಾಹಿತ್ಯ ಚಳವಳಿಯು ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡಿದೆ. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಪರ್ಯಾಯವಾಗಿ ಈ ಸಾಹಿತ್ಯ ಸಮ್ಮೇಳನ ಕಂಡುಬರುತ್ತದೆ. ಎಪ್ಪತ್ತು ಹಾಗೂ ಎಂಭತ್ತರ ದಶಕದಲ್ಲಿ ರೂಪುಗೊಂಡ ಈ ಸಾಹಿತ್ಯ ಪಂಥವು ಅತ್ಯಂತ ಪ್ರಭಾವಶಾಲಿಯಾದುದು. ಇದು ಒಂದು ಚಳವಳಿಯಾಗಿ ಕೂಡ ಪ್ರಸಿದ್ಧವಾಗಿದೆ. ಹಾಗಾಗಿ ಇದು ಒಂದು ಅಭಿವ್ಯಕ್ತಿ ಕ್ರಮವಷ್ಟೇ ಅಲ್ಲ; ಸಾಂಸ್ಕೃತಿಕ ಚಳವಳಿಯು ಹೌದು.

**ಬಂಡಾಯ ಸಾಹಿತ್ಯ ಚಳವಳಿಯ ಆರಂಭಕ್ಕೆ ಪ್ರೇರಕವಾದ ಅಂಶಗಳು**

ಬಂಡಾಯ ಸಾಹಿತ್ಯ ಸಂಘಟನೆ ಒಂದು ವಿವಾದದ ಮೂಲಕ ಆರಂಭವಾಗುತ್ತದೆ. ೧೯೭೯ರಲ್ಲಿ ಧರ್ಮಸ್ಥಳದಲ್ಲಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಈ ಸಮ್ಮೇಳನದಲ್ಲಿ ದಲಿತಸಾಹಿತ್ಯವನ್ನು ಕುರಿತಂತೆ ಒಂದು ಗೋಷ್ಠಿಯನ್ನು ನಡೆಸಬೇಕೆಂದು ವಿನಂತಿ ಮಾಡಿ ಆ ಹೊತ್ತಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಹಂಪನಾ ಅವರಿಗೆ ಮನವಿ ಪತ್ರವನ್ನು ಕಳುಹಿಸಿ ಕೊಡಲಾಯಿತಂತೆ. ಈ ಪತ್ರವನ್ನು ಕಳುಹಿಸಿದ್ದವರು ಚೆನ್ನಣ್ಣ ವಾಲೀಕರ ಅವರು. ಅದರಲ್ಲಿ ದಲಿತ ಸಾಹಿತ್ಯಕ್ಕೆ ಸಂಬಂಧಪಟ್ಟ ಗೋಷ್ಠಿಯೊಂದನ್ನು ಆಯೋಜಿಸುವಂತೆ ಮನವಿ ಮಾಡಲಾಗಿತ್ತು. ಈ ಪತ್ರಕ್ಕೆ ಹಂಪನಾ ಅವರು ಹೀಗೆ ಉತ್ತರಿಸಿದರಂತೆ "ಸಾಹಿತ್ಯದಲ್ಲಿ ದಲಿತ-ಬಲಿತ-ಕಲಿತ" ಎಂಬುದುಂಟೆ? ಸಾಹಿತ್ಯದಲ್ಲಿ ಒಳ್ಳೇಯದು, ಕೆಟ್ಟದ್ದು ಎಂಬ ಎರಡೇ ವಿಷಯ ಇರುವುದು"[೧] ಎಂದು ಉತ್ತರಿಸಿದರಂತೆ. ಈ ಉತ್ತರವನ್ನು ಜಂಬಣ್ಣ ಅಮರಚಿಂತ, ಬೋಳ ಬಂಡೆಪ್ಪ ಇವರೊಂದಿಗೆ ಚೆನ್ನಣ್ಣ ವಾಲೀಕರರು ವಿರೋಧಿಸಿ ಪತ್ರಿಕೆಗಳಗೆ ಕಳುಹಿಸಿದರಂತೆ. ಹಂಪನಾ ಅವರ ಈ ಉತ್ತರದ ಪ್ರತಿಯನ್ನ ಬೇರೆ ಬೇರೆ ಕಡೆಯು ಕಳುಹಿಸಲಾಯಿತು. ಇದಕ್ಕೆ ಶಿವರಾಮ ಕಾಡನಕುಪ್ಪೆ, ಸರಜೂ ಕಾಟ್ಕರ್ ಇವರು ಬೆಂಬಲ ಸೂಚಿಸಿದರು. ಈ ಪ್ರಕರಣ ಕನ್ನಡ ಸಾಹಿತ್ಯದಲ್ಲಿ ಕೋಲಾಹಲ ಎಬ್ಬಿಸಿತು.

೧೯೭೯ ಮಾರ್ಚ್ ೧೦, ೧೧ ರಂದು ಧರ್ಮಸ್ಥಳದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳವನ್ನು ಪರ್ಯಾಯವಾಗಿ ಬೆಂಗಳೂರಿನಲ್ಲಿ ಬಂಡಾಯ ಸಾಹಿತ್ಯ ಸಮ್ಮೇಳನ ನಡೆಸಿದರು. ಬಂಡಾಯ ಸಾಹಿತ್ಯದ ಆಶಯಗಳ ಪರವಾದ, ಸಾಮಾಜಿಕ ಚಿಂತನೆ ಕಡೆ ಒಲವಿದ್ದ ಬರಗೂರು ರಾಮಚಂದ್ರಪ್ಪ, ಕಾಳೇಗೌಡ ನಾಗವಾರ, ಡಿ. ಆರ್. ನಾಗರಾಜ್, ಸಿದ್ಧಲಿಂಗಯ್ಯ, ಸಿ.ಜಿ.ಕೃಷ್ಣಸ್ವಾಮಿ, ಚಂಪಾ ಮುಂತಾದವರು ಈ ಸಮ್ಮೇಳನದ ಸಂಘಟನೆಗಾಗಿ ದುಡಿದರು.

"ಖಡ್ಗವಾಗಲು ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ"[೨] ಎಂಬ ಘೋಷವಾಕ್ಯವನ್ನಿರಿಸಿಕೊಂಡ, ಹೊಸ ಸಾಂಸ್ಕೃತಿಕ ಧೋರಣೆಗಳೊಂದಿಗೆ ಬಂಡಾಯ ಸಾಹಿತ್ಯ ಉದ್ಘಾಟನೆಗೊಂಡಿತು. ಈ ಬಂಡಾಯ ಸಾಹಿತ್ಯ ಸಮ್ಮೇಳನವನ್ನು ತೆಲುಗಿನ ಕ್ರಾಂತಿಕಾರಿ ಕವಿ ಶ್ರೀ ಶ್ರೀ ಎಂದೇ ಖ್ಯಾತರಾದ ಶ್ರೀರಂಗಂ ಶ್ರೀನಿವಾಸರಾವ್ ಉದ್ಘಾಟನೆ ಮಾಡಿದರು.

'ಬಂಡಾಯ ಸಾಹಿತ್ಯ' ಚಳವಳಿಗೆ ಪ್ರೇರಣೆಯನ್ನು ನೆರೆಯೊರೆಯ ರಾಜ್ಯಗಳ ಸಾಹಿತ್ಯ ಚಳವಳಿಗಳು ಸ್ಫೂರ್ತಿಯನ್ನು ಒದಗಿಸಿದ್ದವು ಎಂಬುದನ್ನು ಗಮನಿಸಬಹುದು.

ಮಧ್ಯ ಕರ್ನಾಟಕದ ಪ್ರಾಂತ್ಯಗಳಿಗೆ ಹಾಗೂ ಹೈದರಾಬಾದ್ ಕರ್ನಾಟಕದ ಹಲವೆಡೆಗಳಲ್ಲಿ ಆಂಧ್ರಪ್ರದೇಶದ ಗಡಿ ತಾಗಿಕೊಂಡಿದೆ. ಈ ಭಾಗಗಳ ಜನತೆಗೆ ಹಾಗೂ ತೆಲುಗುಭಾಷೆಯ ಪರಿಚಯವಿರುವ ಲೇಖಕರಿಗೆ ಆಂಧ್ರದಲ್ಲಿ ನಡೆಯುತ್ತಿದ್ದ ಸಾಹಿತ್ಯ ಪ್ರಯೋಗಗಳು, ಚಳಿವಳಿಗಳು ಸಾಕಷ್ಟು ಪ್ರೇರಣೆ ಒದಗಿಸಿದ್ದವು. ಅಂತಹ ಪ್ರೇರಣೆ ಒದಗಿಸಿದ ಸಾಹಿತ್ಯ ಪಂಥಗಳಲ್ಲಿ 'ದಿಗಂಬರ ಕವಿಗಳು' ಒಂದು. ದಿಗಂಬರ ಕವಿಗಳು ಎಂಬ ಹೆಸರಿನ ಗುಂಪು ಮಾಡಿಕೊಂಡು ಆಗ ತರುಣ ಪೀಳಿಗೆಗೆ ಸೇರಿದ್ದ ಹಲವಾರು ಲೇಖಕರು ಸಾಮಾಜಿಕ ಬಗ್ಗೆ ತಮಗಿದ್ದ ತೀವ್ರ ಆಕ್ರೋಶವನ್ನು ಕಾವ್ಯದಲ್ಲಿ ಪ್ರಕಟಿಸಿದರು.

ಚರಬಂಡರಾಜು, ನಿಖಿಲೇಶ್ವರ್, ನಗ್ನಮುನಿ, ಭೈರವಯ್ಯ, ಮಹಾಸ್ವಪ್ನಂ, ಮೊದಲಾದವರು ಅತ್ಯಂತ ಅಸಾಂಪ್ರದಾಯಿಕ ರೀತಿಯಲ್ಲಿ ತಮ್ಮ ಕಾವ್ಯ ಶಕೆಯ ಉದ್ಘಾಟನೆಯನ್ನು ಮಾಡಿದರು. ೧೯೬೫-೬೮ ರವರೆಗೆ ಚಾಲ್ತಿಯಲ್ಲಿದ್ದ ಈ ಆವೇಗಭರಿತ ಸಾಹಿತಿ ಗುಂಪು ಕಾವ್ಯಕ್ಕೆ ವಿಭಿನ್ನ ಬಗೆಯ ಪ್ರತಿಮೆಗಳನ್ನು, ಭಾಷೆ, ಲಯ, ಮತ್ತು ಆಶಯಗಳನ್ನು ಪರಿಚಯಿಸಿತು.

"ವ್ಯವಸ್ಥೆಯ ಕುರಿತಾದ ವಿರೋಧ, ಸಾಮಾಜಿಕ ಕಟ್ಟುಪಾಡುಗಳ ಬಗ್ಗೆ ಕಟುಟೀಕೆ, ಜಾತಿಮತಗಳ ಬಗ್ಗೆ ನಿರ್ದಾಕ್ಷಿಣ್ಯ ಖಂಡನೆಗಳನ್ನು ಹೊಂದಿದ ಇವರ ಕಾವ್ಯ ರಾಜಕೀಯವಾಗಿ ಯಾರನ್ನೂ ಬೆಂಬಲಿಸಿದ ಅರಾಜಕ ವಾದವನ್ನು ಪ್ರತಿಪಾದಿಸಿತ್ತು. ೧೯೫೫ರಲ್ಲಿ ಶ್ರೀಶ್ರೀ ಹೊರತಂದ 'ಮಹಾಪ್ರಸ್ಥಾನ' ಹೊಸಬಗೆಯ ಅಭಿವ್ಯಕ್ತಿ ಮಾರ್ಗದಿಂದ ಬಡಜನರ ಪರವಾರ ನಿಲುವುಗಳಿಂದ ತೆಲುಗು ಸಾಹಿತ್ಯ ಲೋಕವನ್ನು ಅಲುಗಾಡಿಸಿತು. ನಂತರದ ರಾಜಕೀಯ ಬೆಳವಣಿಗೆಯಲ್ಲಿ ಒಂದು ರೀತಿಯ ಸ್ಥಗಿತತೆಯನ್ನು ಅನುಭವಿಸುತ್ತಿದ್ದ ಸಾಂಸ್ಕೃತಿಕ ಲೋಕ ದಿಗಂಬರ ಕವಿಗಳ ಅಭಿವ್ಯಕ್ತಿ ಸ್ಫೋಟದೊಂದಿಗೆ ಕಲ್ಲೋಲಗೊಂಡಿತು".[೩]

ಇನ್ನೊಂದೆಡೆ ಮಹಾರಾಷ್ಟ್ರ 'ಪ್ಯಾಂಥರ್ಸ್' ಚಳವಳಿ ಉತ್ತರ ಕರ್ನಾಟಕದ ಗಡಿ ಪ್ರದೇಶಗಳಲ್ಲಿ ಜನರನ್ನು ಪ್ರೇರಣೆಗೊಳ್ಳುವಂತೆ ಮಾಡಿತು. ಇದಕ್ಕೂ ಮುಂಚೆ ಮರಾಠಿಯಲ್ಲಿ ಸಂತ ಸಾಹಿತ್ಯ ಇದ್ದರೂ ಅದು ದಲಿತ, ಕೆಳವರ್ಗಗಳ ಬಗ್ಗೆ ನೇರವಾಗಿ ದನಿಯತ್ತಿರಲಿಲ್ಲ. 'ಪ್ಯಾಂಥರ್ಸ್ ಸಾಹಿತ್ಯ' ಎಂಬುದು ಡಾ. ಅಂಬೇಡ್ಕರ್ ಅವರ ಪ್ರೇರಣೆಯಿಂದ ರೂಪುಗೊಂಡು ದಲಿತರ ನೋವಿಗೆ ಸ್ಪಂದಿಸಿತು. ತದನಂತರವೇ ೧೯೬೫ರ ನಂತರ ದಲಿತ ಸಾಹಿತ್ಯಕ್ಕೆ ಹುರುಪು ಬಂದದ್ದು.

೧೯೬೦ರಲ್ಲಿ 'ದಲಿತ ಪ್ಯಾಂಥರ್ಸ್' ಅನ್ಯಾಯಗಳ ವಿರುದ್ಧ ಆಕ್ರೋಶ, ದಲಿತರ ಮೇಲಿನ ಅವಮಾನವನ್ನು ವಿರೋಧಿಸಿ ಪ್ರತಿಭಟಿಸಿದ್ದು, ಸ್ವಾಭಿಮಾನದ ಪ್ರತಿಪಾದನೆಗಳು ಮುಂತಾದ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ಬಾಬುರಾವ್ ಬಾಗುರ್, ಕೇಶವ ಮೇಶ್ರಾಮ್, ದಯಾ

ಪವಾರ್ ಮುಂತಾದ ಕವಿಗಳು. ನಾಮದೇವ ಢಸಾಳ್, ಅರ್ಜುನ್ ದಾಂಗೆಳ, ಪ್ರಕಾಶ್ ಜಾಧವ್, ವಾಮನ ನಿಂಬಾಳ್ಕರ್ ಮೊದಲಾದ ಲೇಖಕರು ಮರಾಠಿಯಲ್ಲೂ ಬಂದು ಹೊಸ ಸಾಹಿತ್ಯ ಸೃಷ್ಟಿ ಮಾಡಿದರು.

"ಆಂಧ್ರದಲ್ಲಿ 'ವಿರಸಂ' ಕವಿಗಳು, ಮಹಾರಾಷ್ಟ್ರದಲ್ಲಿ 'ಪ್ಯಾಂಥರ್' ಬರಹಗಾರರು ಒಂದು ಬಗೆಯಲ್ಲಿ ಬಂಡಾಯ ಸಾಹಿತ್ಯಕ್ಕೆ ಸಾಮಾಜಿಕ ಮೇಲ್ಪಂಕ್ತಿ ಹಾಕಿಕೊಟ್ಟರು. ನೆರೆಹೊರೆಯ ರಾಜ್ಯಗಳಲ್ಲಿ ಈ ಅವಧಿಯಲ್ಲಿ ಬಂದ ಹೊಸ ಬಗೆಯ ಸಾಮಾಜಿಕ ಸಾಹಿತ್ಯಕ ಸಂಚಲನೆ ಕರ್ನಾಟಕದ ದಲಿತ, ಹಿಂದುಳಿದ ವರ್ಗಗಳಿಂದ ಬಂದಿದ್ದ ತರುಣ ತಲೆಮಾರಿನ ವಿದ್ಯಾವಂತ ವರ್ಗಕ್ಕೆ ಹೊಸ ನಡೆಯ ಪ್ರೇರಣೆಗಳನ್ನು ತುಂಬಿತು".

ಹೊಸ ಬಗೆಯ ಸಾಹಿತ್ಯ ಮತ್ತು ಆಲೋಚನೆಗಳಿಗೆ ಬೇರೆ ಕಡೆಯಲ್ಲಿ ನಡೆದಂತಹ ಪ್ರಯೋಗಗಳು ಪ್ರೇರಣೆಯನ್ನು ಉಂಟು ಮಾಡುತ್ತವೆಂಬುದು ನಿಜ. ಆದರೆ ಆ ಪ್ರೇರಣೆಗಳನ್ನು ಸ್ವೀಕರಿಸಲು ತಕ್ಕುದಾದ ಸಾಮಾಜಿಕ ಸನ್ನಿವೇಶವೊಂದು ಇರಬೇಕಾಗುತ್ತದೆ. ಹೊಸ ಬಗೆಯ ಆಶೋತ್ತರಗಳನ್ನು ಸಾಮಾಜಿಕ ವರ್ಗಗಳು ತಮ್ಮ ಮುನ್ನಡೆಗೆ ಬೇಕಾದ ಪ್ರೇರಣೆಗಳನ್ನು ಸೂಕ್ತವಾಗಿ ಸ್ವೀಕರಿಸಬಲ್ಲವುಗಳಾಗುತ್ತವೆಯೇ ಹೊರತು, ಸಾಮಾಜಿಕ ನೆಲೆಗಟ್ಟಿನ ಬೆಂಬಲವಿಲ್ಲದೆ. ಕೇವಲ ಆಲೋಚನಾತ್ಮಕವಾಗಿ ಪ್ರತಿಪಾದಿಸಲ್ಪಟ್ಟ ಹೊಸ ಪಂಥ ಅಥವಾ ಆಶಯಗಳು ಸ್ಥಿರವಾಗಿ ನಿಲ್ಲುವುದಿಲ್ಲ. ಇದಕ್ಕೆ ಒಂದು ನಿದರ್ಶನವಾಗಿ ನಾವು 'ಪ್ರಗತಿಶೀಲ ಸಾಹಿತ್ಯ ಪಂಥ'ವನ್ನು ನೋಡಬಹುದು. ೧೯೪೫-೪೬ರಷ್ಟು ಹಿಂದೆಯೇ, ಇಂದಿನ ಬಂಡಾಯ ಸಾಹಿತ್ಯ ಚಳವಳಿ ಪ್ರತಿಪಾದಿಸಿದ ಹಲವಾರು ನಿಲುವುಗಳನ್ನು ಪ್ರಕಟಿಸಿದ್ದ ಜನಸಾಮಾನ್ಯರ ಜೀವನದ ಕಷ್ಟ ಸುಖಗಳನ್ನೇ ತಮ್ಮ ಸಾಹಿತ್ಯದ ವಸ್ತುವಾಗಿ ಆರಿಸಿಕೊಂಡಿದ್ದ 'ಪ್ರಗತಿಶೀಲ' ಸಾಹಿತಿಗಳು ತಮ್ಮ ಪಂಥದ ಪ್ರತಿಪಾದನೆಯನ್ನು ನಾಲ್ಕೈದು ವರ್ಷಗಳಷ್ಟು ಕಾಲ ಮಾತ್ರ ಕಾಪಾಡಿಕೊಳ್ಳಬಲ್ಲವರಾದರು.

ಬಸವರಾಜ ಕಟ್ಟೀಮನಿ, ನಿರಂಜನ, ಅನಕೃ, ತರಾಸು ಮುಂತಾದ ಬರಹಗಾರರು ಎಡಪಂಥೀಯ ಚಿಂತನೆಗಳ 'ಪ್ರಗತಿಪಂಥ'ದಿಂದ ಪ್ರೇರೇಪಿತರಾಗಿದ್ದರು. ಇವರು ಎಡಪಂಥೀಯ ಆಶಯ, ಧೋರಣೆಗಳಿಗೆ ಬದ್ಧರಾಗಿ ಸಾಹಿತ್ಯ ನಿರ್ಮಾಣ ಮಾಡುತ್ತೇವೆಂದು ಹೊರಟವರು. ಅನಕೃ, ತರಾಸು ಬಹಳ ಬೇಗ ಜನಪ್ರಿಯ ಬರವಣಿಗೆಯ ಹಾದಿಯನ್ನು ಹಿಡಿದರು. ಆದರೆ ಕಟ್ಟೀಮನಿ, ತರಾಸು ದೀರ್ಘಕಾಲ ಈ ಹಾದಿಯಲ್ಲಿ ಕ್ರಿಯಾಶೀಲರಾಗಿದ್ದರೂ ಅಂದಿನ ಸಾಂಸ್ಕೃತಿಕ ಸನ್ನಿವೇಶ ಇದನ್ನೊಂದು ಮಹತ್ವದ ಸಾಹಿತ್ಯ ಮಾರ್ಗವನ್ನಾಗಿ ಪರಿಗಣಿಸಲಿಲ್ಲ.

ಏಕೆಂದರೆ ಪ್ರಗತಿಶೀಲರು ಸೈದ್ಧಾಂತಿಕವಾಗಿ ಪಡೆದ ಪ್ರೇರಣೆಗಳನ್ನು ಬೆಂಬಲಿಸುವ ಸಾಮಾಜಿಕ ನೆಲೆಗಟ್ಟು ಕರ್ನಾಟಕದಲ್ಲಿ ಪ್ರಬಲಗೊಂಡಿರಲಿಲ್ಲ. ಅವರು, ಕಾರ್ಮಿಕರು, ಬಡವರು ಶೋಷಿತರ ಪರವಾರ ವಸ್ತುಗಳನ್ನು ಕುರಿತು ಬರೆದಾಗ ಅದನ್ನು ಓದುವ, ಬೆಂಬಲಿಸುವ ಜನರು ಜಾಗೃತವಾಗಿರಬೇಕಾಗುತ್ತದೆ. ಅಂತಹ ಜಾಗೃತಿ ೧೯೭೦ರ ದಶಕದ ಕೊನೆಯವರೆಗೆ ಸಾಕಷ್ಟು ಬಲವಾಗಿರಲಿಲ್ಲ ಎಂಬುದೇ 'ಪ್ರಗತಿಶೀಲ' ಪಂಥದ ಅಲ್ಪಾಯುಷ್ಯಕ್ಕೆ ಕಾರಣವೆಂದು ಹೇಳಬಹುದು.

೧೯೭೫ರಲ್ಲಿ 'ಬರಹಗಾರರ ಮತ್ತು ಕಲಾವಿದರ ಒಕ್ಕೂಟ' ಎಂಬ ಸಂಘಟನೆ ಆರಂಭವಾಗಿ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನೆಲೆಗೊಂಡಿದ್ದ ಸಾಂಪ್ರದಾಯಿಕ ದೃಷ್ಟಿಕೋನದ ಮೇಲ್ಮೈಯನ್ನು ಬ್ರಾಹ್ಮಣ ಜಾತಿ ಲೇಖಕರ ಏಕಸ್ವಾಮ್ಯವನ್ನು ಧಿಕ್ಕರಿಸಲು ಕರೆ ಕೊಟ್ಟರು. ಬ್ರಾಹ್ಮಣೇತರ ಜಾತಿಗಳ ಹಲವು ಪ್ರತಿಭಾವಂತ ಲೇಖಕರು ಈ ಸಂಘಟನೆಯ ಮುಂಚೂಣಿಯಲ್ಲಿದ್ದರಾದರೂ ಇದು ಬೇಗನೆ ಒಡಕು ಕಂಡಿತು.

ಬಂಡಾಯ ಸಾಹಿತ್ಯವು ೧೯೭೯ರಲ್ಲಿ ಪ್ರಾರಂಭಗೊಂಡ ಹಿನ್ನೆಲೆಯಲ್ಲಿ ಒಂದು ಸಾಂಸ್ಕೃತಿಕ ಪರಂಪರೆಯಾಗಿ ವಚನಕಾರರ ಚಳವಳಿ, ಕುವೆಂಪು ಅವರ ಸಾಹಿತ್ಯ, ವೈಚಾರಿಕ ಸಂಘರ್ಷ, ಪ್ರಗತಿಶೀಲರ ಪ್ರಯತ್ನ ಬರಹಗಾರರ ಮತ್ತು ಕಲಾವಿದರ ಒಕ್ಕೂಟದ ನಿಲುವುಗಳು ಮುಂತಾದವುಗಳೆಲ್ಲ ಇದ್ದವು. ಒಂದು ರೀತಿಯಲ್ಲಿ ಈ ಹಿಂದಿನ ಸಾಂಸ್ಕೃತಿಕ ಪರಂಪರೆಯ ಜನಪರ ಆಶಯಗಳ ಒಟ್ಟು ಅಭಿವ್ಯಕ್ತಿಯಂತೆ. ಸಮಗ್ರ ಪ್ರತಿಪಾದನೆಯೆಂಬಂತೆ ಬಂಡಾಯ ಸಾಹಿತ್ಯ ೧೯೭೯ರಲ್ಲಿ ಆರಂಭವಾಗಿ ೧೯೮೦ ಮತ್ತು ೧೯೯೦ರ ದಶಕದಲ್ಲಿ ಅತ್ಯಂತ ಪ್ರಭಾವಶಾಲಿ ಸಾಹಿತ್ಯ ಮಾರ್ಗವಾಗಿ ಪ್ರಚಲಿತಗೊಂಡಿತು.

ಇದರ ಜೊತೆಗೆ ಮುಖ್ಯವಾಗಿ, ದಲಿತ ಮತ್ತು ಅತಿ ಹಿಂದುಳಿದ ಜಾತಿಗಳಿಗೆ ಸೇರಿದ ವಿಸ್ತೃತ ಜನಸಮೂಹ ತನ್ನ ರಾಜಕೀಯ, ಸಾಂಸ್ಕೃತಿಕ 'ಅಸ್ಮಿತೆ'ಯ ಪ್ರತಿಪಾದನೆ ಮಾಡಲು ಅಗತ್ಯವಾದ ಸಾಮಾಜಿಕ ಪ್ರೇರಣೆಯನ್ನು ಸ್ವಾತಂತ್ರ್ಯ ನಂತರದಲ್ಲಿ ಬಂದ ಬೆಳವಣಿಗೆಗಳ ಕಾರಣದಿಂದಾಗಿ ಆ ಹೊತ್ತಿಗೆ ಗಳಿಸಿಕೊಂಡಿತ್ತು.

೧೯೭೩ರಲ್ಲಿ ದೇವನೂರ ಮಹಾದೇವ ಅವರ 'ದ್ಯಾವನೂರು' ಕಥಾ ಸಂಕಲನ, ೧೯೭೩ರಲ್ಲಿ ಸಿದ್ದಲಿಂಗಯ್ಯನವರ 'ಹೊಲೆ ಮಾದಿಗರ ಹಾಡು' ಪ್ರಕಟವಾಗಿ ದಲಿತ ಸಾಹಿತ್ಯವನ್ನು ಅಧಿಕೃತವಾಗಿ ಪ್ರಾರಂಭಿಸಿದ್ದರು. ಆದರೆ ಇವುಗಳು ಬಂಡಾಯ ಸಾಹಿತ್ಯದ ಆಶಯಗಳನ್ನು ಪ್ರಕಟ ಪಡಿಸುತ್ತವೆ ಎಂದು ಹೇಳಲು ತಡವಾಯಿತು.

ಈ ಬೆಳವಣಿಗೆಗಳನ್ನು ಕುರಿತು ಜಿ.ಆರ್.ತಿಪ್ಪೇಸ್ವಾಮಿ ಹೀಗೆ ಹೇಳುತ್ತಾರೆ. ಅದೇನೆಂದರೆ "೧೯೭೪ರಲ್ಲಿ ದೇವರಾಜ ಅರಸರ ಮುಖಂಡತ್ವದಲ್ಲಿ ಎಲ್.ಜಿ.ಹಾವನೂರು

ಆಯೋಗದ ವರದಿ ಮಂಡಿಸಲ್ಪಟ್ಟಿತು. ಆ ಹಿನ್ನೆಲೆಯಲ್ಲಿ ಹಿಂದುಳಿದವರೆಲ್ಲ ಒಂದುಗೂಡಲು ಕಾರಣವಾಯಿತು. ೧೯೭೩ರಲ್ಲಿ ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು 'ಬೂಸಾ' ಎಂದು ಕರೆದರೆಂದು ದೊಡ್ಡ ಧಾಂದಲೆ ನಡೆಯಿತು. ಬೂಸಾ ಪ್ರಕರಣದಿಂದ ಬುದ್ಧಿಜೀವಿಗಳು ಸಂಘಟಿತರಾದರು. ನಂತರ ಹುಟ್ಟಿಕೊಂಡ ದಲಿತ ಸಂಘಟನೆಗಳು ರಾಜಕೀಯವಾಗಿ, ಸಾಮಾಜಿಕವಾಗಿ ಖಚಿತವಾದ ಸೈದ್ಧಾಂತಿಕ ಸ್ವರೂಪ ಪಡೆದುಕೊಂಡವು. ೧೯೭೨ರ ಆಗಸ್ಟ್ ೨೫ ಹಾಗೂ ೨೬ ರಂದು ಮೈಸೂರಿನಲ್ಲಿ "ಜಾತಿ ವಿನಾಶ ಸಮ್ಮೇಳನ" ಜರುಗಿತು. ಕಲಾವಿದರು ಲೋಹಿಯಾ ವಾದಿಗಳು ಇದರ ಹಿನ್ನೆಲೆಯಲ್ಲಿ ಕಾರ್ಯೋನ್ಮುಖರಾದರು. ೧೯೭೪ರ ಏಪ್ರಿಲ್ ೨೦ರಂದು ಕಲಾವಿದರ ಒಕ್ಕೂಟ ರಚನೆಯಾಯಿತು. ಆಗಲೂ ಜಾತಿ ವಿನಾಶ ಸಮ್ಮೇಳನದಲ್ಲಿ ಭಾಗವಹಿಸಿದವರೇ ಇದರಲ್ಲಿ ಭಾಗವಹಿಸಿದ್ದರು........

"........೧೯೭೪ರಲ್ಲೂ ಭದ್ರಾವತಿಯಲ್ಲಿ 'ದಲಿತ ಸಂಘರ್ಷ ಸಮಿತಿ' ಹುಟ್ಟಿಕೊಂಡಿತು..... ಇದರ ಪ್ರಭಾವದಿಂದ 'ದಲಿತ ವಿದ್ಯಾರ್ಥಿ ಒಕ್ಕೂಟ', 'ದಲಿತ ಮಹಿಳಾ ಒಕ್ಕೂಟ', 'ದಲಿತ ಕಲಾ ಮಂಡಳಿ'.......ಮುಂತಾದ ಸಂಘಟನೆಗಳು ಜನ್ಮ ತಳೆದವು..... ದೇವರಾಜ ಅರಸರ ಕಾಲದ 'ಭೂ ಸುಧಾರಣೆ'ಯ ಕಾನೂನುಗಳಿಂದ ಭೂಮಿ ಇಲ್ಲದವರು ಭೂಮಿ ಪಡೆಯುವಂತಾಯಿತು. ಅರಸರ ಸರ್ಕಾರ ಜಾರಿಗೆ ತಂದ ಮೀಸಲಾತಿಯಿಂದಲೂ ದಲಿತ ನೌಕರಿ, ಶಿಕ್ಷಣ ಪಡೆಯಲು ಅನುಕೂಲವಾಯಿತು.... ದಲಿತರು ಅಕ್ಷರ ಕಲಿತದಲ್ಲದೆ ಪ್ರಥಮಬಾರಿಗೆ ಸಾಹಿತ್ಯ ಲೋಕವನ್ನು ಪ್ರವೇಶಿಸಿದ್ದು ಮಹತ್ವದ ಸಂಗತಿ. 'ಕಲೆಗಾಗಿ ಕಲೆಯಲ್ಲ, ಬದುಕಿಗಾಗಿ ಕಲೆ' ಎನ್ನುವಂತೆ 'ಕಾವ್ಯಕ್ಕಾಗಿ ಕಾವ್ಯ ಅಥವಾ ಸಾಹಿತ್ಯಕ್ಕಾಗಿ ಸಾಹಿತ್ಯ' ಎಂಬ ದೃಷ್ಟಿಕೋನಗಳಿಂದ ತೀರ ಭಿನ್ನವಾದ ಮಾರ್ಗದಲ್ಲಿ ಕನ್ನಡದ ಸೃಜನಶೀಲ ರಚನೆಗಳು ಕ್ರಮಿಸಿವೆ. ಆಯಾ ಆಯಾ ಕಾಲಘಟ್ಟದಲ್ಲಿ ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಬದಲಾಗುತ್ತ ಬಂದಿದೆ. ಹಾಗೆಯೇ ಸಾರ್ವಕಾಲಿಕ ಜೀವನ ಮೌಲ್ಯಗಳ ಗಟ್ಟಿಯಾದ ದನಿಯು ಕೇಳಿ ಬಂದಿದೆ. ಈ ದನಿಗಳು ಕಾಲಾನಂತರ ವಿವಿಧ ವಾದಗಳಾಗಿ, ಪಂಥಗಳಾಗಿ, ತತ್ವಗಳಾಗಿ, ಪ್ರಣಾಳಿಕೆಗಳಾಗಿ ಸಿದ್ಧಾಂತಗಳಾಗಿ ರೂಪುಗೊಂಡಿವೆ."[೫] ಯಾವುದೇ ವಾದ ಶೂನ್ಯದಲ್ಲಿ ಹುಟ್ಟುವುದಿಲ್ಲ. ಅದಕ್ಕೆ ತನ್ನದೇ ಆದ ಹಿನ್ನೆಲೆಯಿರುತ್ತದೆ. ಈ ಹಿನ್ನೆಲೆ ಮುನ್ನೆಲೆಗಳ ಧ್ವನಿಗಳಲ್ಲಿ ಮಹಿಳೆಗೂ ಪಾಲಿದೆ. ಹಲವು ತರನಾದ ಸಾಂಸ್ಕೃತಿಕ ತರತಮಗಳ ನಡುವೆ ಹಳೆಗನ್ನಡ ಕಾವ್ಯಗಳು ಹೆಣ್ಣಿನ ಸ್ಥಾನಮಾನವನ್ನು ನಿರ್ದೇಶಿಸಿಲ್ಲದ್ದಿರಬಹುದು. ಆದರೆ ಅವಕಾಶ ದೊರೆತಾಗಲೆಲ್ಲ ಕನ್ನಡ ಕವಿಲೋಕ ಮಹಿಳೆಯರನ್ನು ಕಡೆಗಣಿಸದೆ ಜೊತೆಗೂಡಿಸಿಕೊಂಡು ಬಂದದ್ದಿದೆ.

ಪಂಪ 'ಲಲಿತ ಲತಾಂಗಿಯರಿಂದಲೇ ಸಂಸಾರಂ' ಎನ್ನುವಲ್ಲಿ ಮಹಿಳೆಯರಿಲ್ಲದ ಬದುಕನ್ನು ಅಪೂರ್ಣವೆಂದಿದ್ದಾನೆ. ಇಲ್ಲಿ ಮಹಿಳೆ ಶೃಂಗಾರವೆಂಬಂತೆ ಬಿಂಬಿತ-ವಾಗಿದ್ದರೂ ಪುರುಷನನ್ನು ಅಧ್ಯಾತ್ಮದ ಕಡೆ ಮುಖ ಮಾಡುವಂತೆ ಮಾಡಬಲ್ಲಳು ಎನ್ನುವುದನ್ನು ಧಾರ್ಮಿಕ ಕಾವ್ಯಗಳು ತಿಳಿಸಿವೆ. ಆದಿಪುರಾಣದಲ್ಲಿ ಸುಖದಲ್ಲಿ ಮೈಮರೆತ ವೃಷಭನಾಥನನ್ನು ಎಚ್ಚರಿಸುವ ವಿಧ್ಯಾಧರ ಸ್ತ್ರೀಯರು ಸಾಧನೆಯತ್ತ ಮುಖಮಾಡುವಂತೆ ಪ್ರೇರೇಪಿಸುತ್ತಾರೆ.

ಮಧ್ಯಕಾಲೀನ ಸಾಹಿತ್ಯವಂತು ಗಂಡು ಹೆಣ್ಣು ಎಂಬ ಭೇದವಿಲ್ಲದೆ ಅಸಮಾನತೆಯನ್ನು ಪ್ರಶ್ನಿಸುವ, ನಿರಾಕರಿಸುವ ಮೂಲಕ ಶ್ರೇಷ್ಠ-ಕನಿಷ್ಠವೆಂಬ ವ್ಯಸನಗಳನ್ನೇ ಮೀರಿನಿಲ್ಲಲು ಕರೆಕೊಟ್ಟಿದೆ.

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಗಂಡೂ ಅಲ್ಲ ಹೆಣ್ಣು ಅಲ್ಲ

ಎಂಬ ದೇವರ ದಾಸಿಮಯ್ಯನ ಉದ್ಘೋಷ ಬರಿಯ ಘೋಷಣೆಯಾಗದೆ ನಡಾವಳಿಯಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಅಕ್ಕಮಹಾದೇವಿ, ಮುಕ್ತಾಯಕ್ಕ, ನೀಲಾಂಬಿಕೆ, ಗಂಗಾಂಬಿಕೆ, ಆಯ್ದಕ್ಕಿ ಲಕ್ಕಮ್ಮ, ಸೂಳೆಸಂಕವ್ವೆ ಮೊದಲಾದ ಶರಣೆಯರ ಪ್ರತಿನಿಧೀಕರಣಕ್ಕೆ ಬೃಹತ್ ವೇದಿಕೆಯನ್ನು ನಿರ್ಮಿಸಲು ಕಾರಣವಾಗಿದೆ.

ತದನಂತರ ಕಾಲದಲ್ಲಿ ಮಸುಕಾದಂತೆ ಕಂಡ ಮಹಿಳೆಯರ ನೇರ ಪ್ರವೇಶಕ್ಕೆ ಕನ್ನಡ ಸಾಹಿತ್ಯ ಕೆಲವು ಕಾಲ ಕಾಯಬೇಕಾಯಿತು.

ಪೆಣ್ಣಲ್ಲವೇ ತಮ್ಮನ್ನೆಲ್ಲ ಹಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು
ಕಣ್ಣು ಕಾಣದಗಾವಿಲರು[೬]

ಎಂಬ ಮಾತುಗಳು ಕಂಡು ಬಂದವು.

ಪಾಶ್ಚಾತ್ಯ ರಾಷ್ಟ್ರದಲ್ಲಿನ ಕೈಗಾರಿಕೀಕರಣದಿಂದ ಮತ್ತು ಇಂಗ್ಲಿಷ್ ಶಿಕ್ಷಣ ಮೊದಲಾದ ಸಾಹಿತ್ಯದ ಹೊರಳು ದಾರಿಗಳು ಕನ್ನಡದಲ್ಲಿ ನವೋದಯ, ನವ್ಯತೆಯ ಪಂಥಗಳಾಗಿ ಎಡೆ ಪಡೆದವು. ಗದ್ಯಕ್ಕೆ ಜೋತು ಬಿದ್ದ ಪ್ರಗತಿಶೀಲಕ್ಕಿಂತ ಪದ್ಯಕ್ಕೆ ತಮಟೆಗಳ ದನಿಹೊಕ್ಕುವಂತೆ ಮಾಡಿದ ಬಂಡಾಯ, ದಲಿತ ಪ್ರಕಾರಗಳು ಮಹಿಳೆಯರ ಸಮಸ್ಯೆಗಳನ್ನ ಕಾವ್ಯಕ್ಕೆ ಅನ್ವಯಿಸಿ

ನಿರೂಪಿಸಿದವು. ಇಂತಹ ಹಿನ್ನೆಲೆಯನ್ನೊಂದಿರುವ ಕನ್ನಡ ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯವು ವಿಭಿನ್ನ ರೀತಿಯಲ್ಲಿ ಅದನ್ನು ಶ್ರೀಮಂತಗೊಳಿಸಿದೆ.

ಇಂಥ ಒಂದು ಶ್ರೀಮಂತವಾದ ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ವಿಶಿಷ್ಟ ವಸ್ತು, ಧೋರಣೆಗಳ ಮೂಲಕ ಸಾಹಿತ್ಯ ರಚನೆಯಲ್ಲಿ ತೊಡಗಿರುವ ಲೇಖಕಿಯರಲ್ಲಿ ಮಲ್ಲಿಕಾ ಘಂಟಿರವರು ಪ್ರಮುಖರಾಗಿದ್ದಾರೆ.

೮೦ರ ದಶಕದಲ್ಲಿ ಬರಹಕ್ಕೆ ತೊಡಗಿದ ಮಲ್ಲಿಕಾ ಘಂಟಿಯವರು 'ತುಳಿಯದಿರಿ ನನ್ನ', 'ಈ ಹೆಣ್ಣುಗಳೆ ಹೀಗೆ', 'ರೊಟ್ಟಿ ಮತ್ತು ಹುಡುಗಿ', 'ಬೆಲ್ಲದಚ್ಚು ಮತ್ತು ಇರುವೆ ದಂಡು' ಎಂಬ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ.

ಮಲ್ಲಿಕಾ ಘಂಟಿಯವರು ಕೃಷಿ ಮಾಡಿದ ಮತ್ತೊಂದು ಕ್ಷೇತ್ರ ನಾಟಕ ಪ್ರಕಾರ. ಇವರು 'ಚಾಜ', 'ಒಂದು ಬಾವಿಯ ಸುತ್ತ', 'ದಫನ್' ಎನ್ನುವ ಮೂರು ಸಾಮಾಜಿಕ ನಾಟಕಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ನಾಟಕಗಳು ರಚಿತವಾಗಿದ್ದು ಆಧುನಿಕ ಕಾಲದಲ್ಲೇ. ಕನ್ನಡದಲ್ಲಿ ಸಿಂಗಿರಾರ್ಯನ 'ಮಿತ್ರಾವಿಂದಾ ಗೋವಿಂದ' ಮೊದಲ ನಾಟಕವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ನಾಟಕ ಶ್ರೀಹರ್ಷನ ರತ್ನಾವಳಿಯನ್ನು ಅನುಸರಿಸಿ ಬರೆದದ್ದಾಗಿದೆ. ಆದರೆ ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ, ಕನ್ಯಾ ವಿಕ್ರಯ ಮುಂತಾದ ಕೃತಿಗಳಿಂದ ಕನ್ನಡ ನಾಟಕ ರಚನೆ ನಿಜಾರ್ಥದಲ್ಲಿ ಪ್ರಾರಂಭವಾದರೂ ನಂಜನಗೂಡು ತಿರುಮಲಾಂಬಾ ಅವರು ಈ ಸಾಹಿತ್ಯ ಪ್ರಕಾರಕ್ಕೆ ನಾಂದಿ ಹಾಡಿದ ಮೊದಲ ಮಹಿಳೆಯಾಗಿದ್ದಾರೆ. ಇವರ ನಂತರ ಕನ್ನಡದಲ್ಲಿ ಸ್ವತಂತ್ರ ನಾಟಕಗಳ ರಚನೆ ಬಂದದ್ದು ಕಡಿಮೆ. ಮುಂದೆ ನಾಟಕ ರಚನೆಯಲ್ಲಿ ತೊಡಗಿದ ಮಹಿಳೆಯರು ವಿರಳ. ಅಂತಹ ವಿರಳ ನಾಟಕಕಾರರಲ್ಲಿ ಮಲ್ಲಿಕಾ ಘಂಟಿ ಒಬ್ಬರು. ಇವರ ನಾಟಕಗಳು ರಂಗದ ಮೇಲೆ ಪ್ರದರ್ಶನಗೊಂಡು ಪ್ರೇಕ್ಷಕರ ಪ್ರಶಂಸೆಗೂ ಪಾತ್ರವಾಗಿವೆ.

ಅಲ್ಲದೆ ಘಂಟಿಯವರು ಮೂವರು ಐತಿಹಾಸಿಕ ವ್ಯಕ್ತಿಗಳಾದ 'ಅಹಲ್ಯಾ ಬಾಯಿ ಹೋಳ್ಕರ್', 'ಸಂಗೊಳ್ಳಿ ರಾಯಣ್ಣ', 'ಇಟಗಿ ಭೀಮವ್ವ'ರನ್ನು ಕುರಿತು ಜೀವನ ಚರಿತ್ರೆಗಳನ್ನು ಬರೆದು ಅವರ ಆದರ್ಶ ವ್ಯಕ್ತಿತ್ವವನ್ನು ತಿಳಿಸಿದ್ದಾರೆ.

ಘಂಟಿಯವರು ಸೃಜನೇತರ ಪ್ರಕಾರವಾದ ವಿಮರ್ಶೆಯ ರಚನೆಯಲ್ಲೂ ತೊಡಗಿದ್ದಾರೆ. ವಿಮರ್ಶೆಯು ಆಧುನಿಕ ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ, ಅದರಲ್ಲೂ ಮಹಿಳೆಯರು ವಿಮರ್ಶೆಗೆ ತೊಡಗಿದ್ದು ಕಡಿಮೆ. ಸ್ತ್ರೀವಾದಿ ಸಾಹಿತ್ಯ ಧೋರಣೆಯಲ್ಲಿ ತಮ್ಮದೇ ಆದ ಸೈದ್ಧಾಂತಿಕ ನೆಲೆಯಲ್ಲಿ ವಿಮರ್ಶೆಗೆ ತೊಡಗಿರುವ

ಮಲ್ಲಿಕಾರವರು 'ತನುಕರಗದವರಲ್ಲಿ', 'ಧರಣಿಯ ಮೇಲೊಂದು' ಎಂಬ ವಿಶಿಷ್ಟ ವಿಮರ್ಶಾ ಕೃತಿಗಳನ್ನ ಪ್ರಕಟಿಸಿದ್ದಾರೆ.

ಸಾಹಿತ್ಯ ಸೃಷ್ಟಿಗೆ ಪುರುಷ ಯೋಗ್ಯರೆಂದು ಭಾವಿಸುತ್ತಿದ್ದಂಥ ಸಮಾಜದಲ್ಲಿ ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ ವೈಯಕ್ತಿಕ ನೆಲೆಯ ಅಡ್ಡಿಗಳನ್ನೆಲ್ಲ ಮೀರಿ ವೈವಿಧ್ಯಮಯ ಸಾಹಿತ್ಯವನ್ನು ನೀಡಿದ ಮಲ್ಲಿಕಾ ಘಂಟಿ ಅವರು ಅಸಾಧಾರಣ ವ್ಯಕ್ತಿತ್ವವುಳ್ಳವರು.

**ಮಲ್ಲಿಕಾ ಘಂಟಿ ಅವರ ಮುಖ್ಯ ಸೃಜನಶೀಲ ಕೃತಿಗಳು**

"ಸಾಹಿತ್ಯವು ಜೀವನದ ಪ್ರತಿಬಿಂಬವಲ್ಲ, ಅದು ಜೀವನದ ಗತಿಬಿಂಬ"[2] ಎಂಬ ಜಿ. ಎಸ್. ಶಿವರುದ್ರಪ್ಪನವರ ಮಾತಿಗೆ ಕಟಿಬದ್ಧರಾಗಿರುವ ಮಲ್ಲಿಕಾಘಂಟಿ ಅವರು ವಿವಿಧ ವರ್ಗಗಳ ನಾಡಿಮಿಡಿತವನ್ನು ಅರಿತವರು. ಕಾವ್ಯ ಕವಿಯ ಅನುಭವ ಮೂಸೆಯಿಂದ ಬರುವಂಥದ್ದು. ಕಾವ್ಯ ಒಂದು ಸೃಜನಶೀಲ ಸೃಷ್ಟಿಕ್ರಿಯೆ. ಇಂತಹ ಸೃಷ್ಟಿಕ್ರಿಯೆಯಾದ ಕವನಗಳ ರಚನೆಯಲ್ಲಿ ಮಲ್ಲಿಕಾ ಘಂಟಿ ಅವರು ಒಂದು ವಿಶಿಷ್ಟ ಅಭಿವ್ಯಕ್ತಿ ಧಾಟಿಯನ್ನು ಅಭಿವ್ಯಕ್ತಿಸಿದ್ದಾರೆ. ಅದನ್ನು ಅವರ ಅಮೂಲ್ಯವಾದ ನಾಲ್ಕು ಕವನ ಸಂಕಲನಗಳಲ್ಲಿ ಕಾಣಬಹುದು. ಮಲ್ಲಿಕಾ ಘಂಟಿಯವರ ಮೊದಲ ಕವನ ಸಂಕಲನ 'ತುಳಿಯದಿರಿ ನನ್ನ' ೧೯೮೬ರಲ್ಲಿ ಪ್ರಕಟವಾಯಿತು. ಅನಂತರ ೧೯೯೪ರಲ್ಲಿ 'ಈ ಹೆಣ್ಣುಗಳೆ ಹೀಗೆ', : ೧೯೯೯ರಲ್ಲಿ 'ರೊಟ್ಟಿ ಮತ್ತು ಹುಡುಗಿ' ಹಾಗೂ ೨೦೦೫ರಲ್ಲಿ 'ಬೆಲ್ಲದಚ್ಚು ಮತ್ತು ಇರುವೆ ದಂಡು' ಪ್ರಕಟವಾದವು.

* * * * *

ಬಿ.ಎಂ. ಶ್ರೀಕಂಠಯ್ಯನವರಿಂದ ಪ್ರಾರಂಭಗೊಂಡು ಪಾಶ್ಚಾತ್ಯ ವೇಷಭೂಷಣ ಗಳಿಂದ ಕನ್ನಡ ಅಟ್ಟವೇರಿದ ನವೋದಯ ಕಾವ್ಯ ಇಂದಿನ ದಲಿತ–ಬಂಡಾಯದವರೆಗೂ ಮೈಯಿಳಿದು, ಮೈದುಂಬುತ್ತಲೇ ಅಂದಂದಿನ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ ಬದಲಾವಣೆಗಳಿಗೆ ಪ್ರತಿಕ್ರಿಯಿಸುತ್ತ ಬಂದಿದೆ.

ತಲೆ ತಲಾಂತರಗಳಿಂದ ಕ್ರೂರ ಶೋಷಣೆಗೆ ಒಳಗಾದ ಬಹುಜನ ಸಮುದಾಯ ಎದ್ದು ನಿಲ್ಲಲು ಹವಣಿಸುವ ಪ್ರಜ್ಞೆಯ ಬಗ್ಗೆ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಚಿಂತಿಸುವ ಮಲ್ಲಿಕಾ ಘಂಟಿ ತಮ್ಮ ಕವನದಲ್ಲಿ ಹೀಗೆ ಹೇಳುತ್ತಾರೆ.

ಹಸಿದವರ ಬಾಯ ಬಡಿದು ಕಸಿದುಕೊಂಡವರು
ಉಂಡುಟ್ಟವರ ತಿಂಡಿ ತೀಟಿಗಾಗಿ ಬಂದವರಿಗೆ

ಸೆರಗ ಹಾಸಿದೆ ನಾ ತುತ್ತಿಗಾಗಿ
ತುತ್ತುಂಡು ಹೆತ್ತಿರುವೆ ನಾ ನಿನ್ನ ಮರೆಯದಿರು ಕಸಿದುಕೊಂಡವರಾ
(ನಮ್ಮದಲ್ಲ ಧ್ವಜವಿಂದು)

ಎನ್ನುವಲ್ಲಿ ಸತ್ಯದ ಮನವರಿಕೆಯಾಗಿದೆ. ಬಡವರು, ದೀನರು, ಅಸಹಾಯಕ ಹೆಣ್ಣುಮಗಳು ಅನುಭವಿಸುವ ನೋವನ್ನು ಎಲ್ಲರನ್ನು ಎಚ್ಚರಿಗೊಳಿಸುವಂತೆ ಹೇಳಿದ್ದಾರೆ.

ನಾವು ಹೊಲೆ ಮಾದಿಗರಂತ
ಯಾಕಂದ್ರ ನಾವು
ಸಮಾಜ ಪುರುಷನ ಪಾದಂತ
(ನಾವೆಲ್ಲ ಚತುರ್ಮುಖನ ಪಾದಂತಽಽ)

ಎನ್ನುವ ಕವಿತೆ ಈ ಸಮೂಹದಲ್ಲಿರುವ ಶ್ರೇಣೀಕೃತ ವ್ಯವಸ್ಥೆಯನ್ನು ಕುರಿತು ವಿಡಂಬಿಸುತ್ತದೆ. ಆ ಮೂಲಕ ಕವಿ ಈ ಸಮಾಜದ ಪೊಳ್ಳುತನವನ್ನು ಬಯಲಿಗೆಳೆದಿದ್ದಾರೆ. ಇವರನ್ನು ವಾಸ್ತವ ಲೋಕಕ್ಕೆ ತರುವ ನಿಟ್ಟಿನಲ್ಲಿ ಕವಿ ಹೀಗೆ ಹೇಳುತ್ತಾರೆ :

ನಿಮ್ಮ ಚಪ್ಲಿಕಾಲ್ಮರಿ ಹೊಲಿಯಾಕ
ನಾವು ಬೇಕಂತ
ನಿಮ್ಮ ಎಮ್ಮಿ ಎತ್ತು ಸತ್ತರ
ಹೊರ್ಲಾಕ ನಾವೇ ಬೇಕಂತ
ನೀವು ಸತ್ತರೆ, ಆ ಸುದ್ದೀ
ನಿಮ್ಮ ಬಂಧು ಬಳಗಕ್ಕೆ ತಿಳಿಸಾಕ
ನಾವೂ ಬೇಕಂತ.
(ನಾವೆಲ್ಲ ಚತುರ್ಮುಖನ ಪಾದಂತಽಽ)

ಎನ್ನುವ ಕವಿ ಸಾಮಾಜಿಕ ಜವಾಬ್ದಾರಿಯನ್ನು ಹೊತ್ತಿರುವವರನ್ನು ಕುರಿತು ಉದಾಸೀನ ತೋರುವವರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಶೂದ್ರರ ಬೌದ್ಧಿಕತೆಯು ಅವನಲ್ಲಿ ತುಂಬಬೇಕಾಗಿದ್ದ ಆತ್ಮಬಲವನ್ನು ಜಾತಿಮೂಲ ಕಿತ್ತುಕೊಳುತ್ತದೆ. ಹಾಗಾಗಿ ಜಾತೀಯತೆ, ಅಸಮಾನತೆ, ಅನ್ಯಾಯ ಇಂಥ ಸಾಮಾಜಿಕ ಅನಿಷ್ಟಗಳ ವಿರುದ್ಧ ಸಿಡಿದೆದ್ದ ಕವಿ ಸುಲಿವ ವರ್ಗ ನಿರ್ಮಿಸಿದ ಸಂಸ್ಕೃತಿಯನ್ನು ವಿರೋಧಿಸುತ್ತಾರೆ.

ಸ್ವಾತಂತ್ರ್ಯ, ಸಮಾನತೆ
ಎಂದು

ಸರಸಕ್ಕೆ ಕರೆಯುವ ಗೋಸುಂಬೆಗಳನ್ನು
ಮುತ್ತಿಕ್ಕಲೇ?
ಬಂಗಾರದ ಪಂಜರದ ಬಾಗಿಲು ತೆರೆದು
ಬೆಳ್ಳಿ ಕಾಲಂದುಗೆ ತೊಡಿಸಿ
ಹಾರದಂತೆ ಮಾಡಿರುವ ನೀವು
ಮನುವಿನ ಗುಣಗಳೇ
ಮನದಲ್ಲಿದ್ದರೂ
ಪ್ರಗತಿಪರರು ಎನ್ನುವ
ತೈಲ ಲೇಪಿಸಿಕೊಂಡಿರುವ
ನಿಮ್ಮೊಳು ಹೊಕ್ಕು ಹಿಡಿಯ
ಬಂದವರಿಂದ ನುಣುಚಿಕೊಳ್ಳುವ
ನೀವು ಮನುಗಳಲ್ಲವೆ?
ಮಲೆತು ನಾರುತ್ತಿರುವ
ವ್ಯವಸ್ಥೆಯ ಹುರುಲಿನಲ್ಲಿ ಸಿಲುಕಿದ್ದೇನೆ
ಉಸಿರುಗಟ್ಟಿ ಸಾಯಿಸುತ್ತಿರುವ
ಕಪಿಮುಷ್ಟಿಯಿಂದ ಬಿಡಿಸಿಕೊಂಡು
ಹಾರಬೇಕೆಂದಿರುವೆ ನೀಲಿ ಬಾಂದಳದಲ್ಲಿ
(ತುಳಿಯದಿರಿ ನನ್ನ!)

ಈ ಸಾಲುಗಳನ್ನು ನೋಡಿದಾಗ ಕವಿ ಬೀಸುವ ಗಾಳಿಯಲ್ಲಿ – ತೇಲುವ ಮೋಡಗಳಲ್ಲಿ ಜೊತೆಗೂಡಿ ತಾನೇ ತಾನಾಗಿ ಹಾರಬೇಕೆಂಬ ಸ್ವಾತಂತ್ರ್ಯ ಪ್ರಶ್ನೆಯನ್ನು, ಜೊತೆಗೆ ಇಡೀ ಮನು ಸಂಸ್ಕೃತಿಯ ವಿರುದ್ಧ ಧಿಕ್ಕಾರವನ್ನು ಹಾಕಿದ್ದಾರೆ. ಅದರ ವಿರುದ್ಧದ ಹೋರಾಟ ಈ ಕವನದಲ್ಲಿದೆ.

ಹೆಣ್ಣುಮಕ್ಕಳೆಂದರೆ ಗುಣದಲ್ಲಿ ಮಾತ್ರ ವಾತ್ಸಲ್ಯದ ಸೆಲೆ ಇದ್ದಂತೆ. ಅವರ ವೈಪರೀತ್ಯದೊಂದಿಗೆ ಲೋಕ ಒಪ್ಪಂದ ಮಾಡಿಕೊಳ್ಳುತ್ತದೆ ಎಂಬುದನ್ನು ಮಲ್ಲಿಕಾ ಘಂಟಿ ತಮ್ಮ 'ಮಗಳಿಗೊಂದು ಕಿವಿ ಮಾತು' ಕವಿತೆಯಲ್ಲಿ ಕಾಣಿಸುತ್ತಾರೆ. ಹಳೆಯ ತಲೆಮಾರಿನಿಂದ ಹೊಸ ತಲೆಮಾರಿಗೆ ಅನುಭವಗಳನ್ನು ವಿಸ್ತರಿಸುತ್ತ ಇತಿಹಾಸದ ಪುನರಾವೃತ್ತಿಯಾಗಿರುವುದನ್ನು ತಪ್ಪಿಸಲು ಕವಿತೆ ಹವಣಿಸುತ್ತದೆ.

ಹೂವಿನಂತೆ ಕೋಮಲಾಂಗಿ ನೀನೆಂದು
ಆಲಂಗಿಸಲು ಬಂದಾಗ
ನಿನ್ನ ಭಾವನೆಗಳ ಬಲಿಗೊಟ್ಟು
ತ್ಯಾಗದ ಬಲಿಪೀಠವೇರಿ ಯಂತ್ರದಂತೆ
ಬಿಚ್ಚಿಕೊಳ್ಳದೆ ನಿನ್ನ ನೀ ಉಳಿಸಿಕೊಳ್ಳಲು
ಮೈತುಂಬ ಮುಳ್ಳುಗಳ ಬೆಳೆಸಿ
ಮೃದು ಮನಸಿನವಳೆಂದು ಮಧುರವಾಗಿ
..........................................................
..........................................................
ನಿನ್ನ ಭಾವನೆಗಳಿಗೆ ಕೊಳ್ಳಿಯಿಡುವ ಪ್ರಸಂಗಗಳೆದುರಾದಾಗ
ಬದುಕುವುದು ಅನಿವಾರ್ಯವೆಂದು
ನನ್ನಂತೆ ನೀ ಒಪ್ಪಂದ ಮಾಡಿಕೊಳ್ಳದಿರು
ನನ್ನಿತಿಹಾಸವ ನೀ ಮರೆತರೆ
ಹೊಸ ಇತಿಹಾಸ ನೀ ಬರೆಯುವುದೆಂತು?

(ಮಗಳಿಗೊಂದು ಕಿವಿಮಾತು)

ಈ ಕವಿತೆಯಲ್ಲಿ ಹೊಸ ಸಮಾಜದ ಸೃಷ್ಟಿ ಹಾಗೂ ಹೊಸ ಇತಿಹಾಸದ ದೃಷ್ಟಿಯನ್ನು ಸಹಜ ಅಭಿವ್ಯಕ್ತಿಯಲ್ಲಿ ವರ್ಣಿಸಿದ್ದಾರೆ. ಇಲ್ಲೆಲ್ಲ ಕವಿ ಸದಾ ಹೊಸತನಕ್ಕೆ ತುಡಿಯುವ ಮನಸ್ಥಿತಿಯಲ್ಲಿ ಇರುವುದನ್ನು ಕಾಣಬಹುದು.

ಓ ಸ್ವಾತಂತ್ರವೇ
ಇತಿಹಾಸಕ್ಕೆ ಹೊಸ
ಸೀರೆ ಉಡಿಸುತ್ತೇನೆಂದು
ನನ್ನ ಭೂತದ
ತೇಪೆ ಹಚ್ಚಿದ ಸೀರೆ
ಬಿಚ್ಚದೆಯಲ್ಲಿ
ಎಂದು ಕೊಡಿಸುವೆ
ನನಗೆ ಭವಿಷ್ಯತ್ತಿನ
ಹೊಸ ಸೀರೆಯ

(ಸ್ವಾತಂತ್ರ್ಯ)

ಇಂದು ನಮಗೆ ಸ್ವಾತಂತ್ರ್ಯ ದೊರಕಿದ್ದರೂ ಹಿಂದಿನ ಸ್ವಾತ್ರಂತ್ರ್ಯವು ಕಳಚಿ ಬಿದ್ದಿದ್ದು, ನಮಗೆ ಸ್ವಾತಂತ್ರ್ಯವೇ ಸಿಗದಾಗಿದೆ ಎಂದು. ಕವಿ ಕಳಚಿ ಬಿದ್ದ ಭೂತದ ಸ್ವಾತಂತ್ರ್ಯ ಸೀರೆಯನ್ನಾದರೂ ಉಳಿಸಿಕೊಳ್ಳಬೇಕು ಎನ್ನುವ ತವಕದಲ್ಲಿದ್ದಾರೆ.

ತಮ್ಮ 'ಲಗ್ನಪತ್ರ' ಎಂಬ ಕವಿತೆಯಲ್ಲಿ

ಸಬ್ ಜೇಲಿನಿಂದ
ಗುನ್ಹೆ ಸಾಬೀತಾದಾಗ
ಸೆಂಟ್ರಲ್ ಜೇಲಿಗೆ
ಹೋಗುವ ಪ್ರವೇಶಪತ್ರ

(ಲಗ್ನ ಪತ್ರ)

ಇಲ್ಲಿ ತನ್ನದೇ ಆದ ಮಹಿಳೆಯ ಅತಂತ್ರ ಮತ್ತು ಪರತಂತ್ರ ಸ್ಥಿತಿಯನ್ನು ಚಿತ್ರಿಸಿದ್ದಾರೆ. ಸ್ವತಂತ್ರ ಭಾರತ ಸಂವಿಧಾನ ಬದ್ಧವಾಗಿಯೆ ಮಹಿಳೆಯರಿಗೆ, ಪುರುಷರಿಗೆ, ಸರಿಸಮಾನತೆಯನ್ನು ಕಲ್ಪಿಸಿದೆ. ಆದರೆ ಅವೆಲ್ಲ ಕಾಗದದ ಮೇಲಿರಲು ಯ್ಯೋಗವಾದವುಗಳು. ಅವುಗಳ ಬಳಕೆ, ಚಲಾವಣೆಯ ಬಗ್ಗೆ ದಿವ್ಯ ಮೌನ, ನಿರ್ಲಕ್ಷ್ಯದ ಹಿಂದೆ ಯಜಮಾನ ಸಂಸ್ಕೃತಿಯ, ಸಮಾಜದ ಪಟ್ಟಭದ್ರ ಹಿತಾಸಕ್ತಿಯ ಒತ್ತಾಸೆಗಳಿರುತ್ತವೆ ಅನ್ನುವುದೇ ಸತ್ಯ.

'ರೊಟ್ಟಿ ಮತ್ತು ಹುಡುಗಿ' ಕೃತಿಯನ್ನು ಪರಿಶೀಲಿಸುತ್ತಾ ರಂಜಾನದರ್ಗಾ ಅವರು "ಈ 'ರೊಟ್ಟಿ ಮತ್ತು ಹುಡುಗಿ' ಹಸಿವು ಮತ್ತು ಪ್ರೀತಿಯ ಅನಿವಾರ್ಯತೆಯನ್ನು ಸಾರುವ ಕವನಗಳಾಗಿದ್ದು, ಹೆಣ್ಣಿಗೆ ಪ್ರೀತಿಯೇ ನಿರಂತರ ಹಸಿವಾಗಿ ಕಾಡುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಗಂಡಿಗೆ ಪ್ರೀತಿಯ ಹಸಿವೆಂದರೇನು ಎಂಬುದೇ ಗೊತ್ತಾಗುತ್ತಿಲ್ಲ. ಗೊತ್ತಾದ ಕ್ಷಣದಲ್ಲೇ ಆತ ಸ್ತ್ರೀವಾದಿಯಾಗುತ್ತಾನೆ".[೮]

"ಸಮಾಜ, ರಾಜಕಾರಣ, ಸಂಸ್ಕೃತಿ, ಪರಂಪರೆ, ಧರ್ಮ ಅರ್ಥ ಮತ್ತು ಕಾಮವನ್ನು ನಾವು ಪುರುಷಮಯವಾಗಿಯೇ ನೋಡುತ್ತೇವೆ. ಆ ಮೂಲಕ ನಾವು ಬುದ್ಧಿಗೆ ಚೌಕಟ್ಟನ್ನು ಹಾಕಿಕೊಂಡಿದ್ದೇವೆ. ಅದನ್ನೇ ಸಾಧನೆಯೆಂದು ಸಾಧಿಸಲು ಶತಶತಮಾನಗಳಿಂದ ಶಕ್ತಿ ಮೀರಿ ಶ್ರಮಿಸುತ್ತಿದ್ದೇವೆ. ಪುರುಷ ಪ್ರಾಧ್ಯಾನದಿಂದ ಉಂಟಾದ ಅಜ್ಞಾನದ ಕಾರಣ ಸದಾ ಜಾಗೃತವಾಗೊ ಟೊಳ್ಳುತನದಿಂದ ಕೂಡಿದ ಅಹಂ ಅನ್ನು ಕಾಪಾಡಿಕೊಳ್ಳುವುದಕ್ಕಾಗಿ ಹೆಣ್ಣನ್ನು ತಹಬಂದಿಯಲ್ಲಿಡಲು ತಂತ್ರಗಳನ್ನು ಸೃಷ್ಟಿಸುತ್ತಲೇ ಇರುತ್ತೇವೆ. ಹೀಗಾಗಿ ಬದುಕುವುದನ್ನು ಕಲಿಯದೆ ಮುಂದುವರಿಯುತ್ತಿದ್ದೇವೆ"[೯] ಎನ್ನುತ್ತಾರೆ.

ಪುರುಷನು ಸ್ತ್ರೀಯಿಂದಲೇ ಜನ್ಮ ಪಡೆದು ಸ್ತ್ರೀಯ ಜೊತೆಗಿದ್ದರೂ ನಿರುಮ್ಮಳ ಬದುಕನ್ನು ನಡೆಸಲಾಗುತ್ತಿಲ್ಲ. ಆತನ ಅಪ್ಪಣೆಯ ಮೇರೆಗೆ ಹೆಣ್ಣು ಕಾಲದೊಂದಿಗೆ ಹೊಂದಿಕೊಳ್ಳಬೇಕು.

ಸಂಸಾರ ಸಾಗರದಲ್ಲಿ ಹೆಣ್ಣೊಂದು ದೋಣಿ
ದಡ ಸೇರಿಸಲ್ಲೊಬ್ಬ ಬೇಕಲ್ಲ ಹುಟ್ಟು ಹಿಡಿದವ
ಹುಟ್ಟು ಹಾಕುವವನ ಆಜ್ಞೆಯಂತೆ ಚಲಿಸಬೇಕಲ್ಲವೆ ದೋಣಿ
ದೋಣಿಯಲ್ಲೆಲ್ಲ ತೂತುಗಳಿದ್ದರೂ ಮುಳುಗಲಾರದು ಬಿಡು
ಋಷಿಮುನಿಗಳ ತಪೋಬಲದಿಂದ ಕಲ್ಲು ಬಂಡೆಗಳಾದವರ
ಬದುಕಿಸಲು ಬರುವವರು ರಾಮರಲ್ಲವೆ ಎಂದರವರು.
(ಹೀಗೆಂದರವರು)

ಎನ್ನುವಲ್ಲಿ ಹುಟ್ಟು ಪಡೆದ ಈ ಪುರುಷ ಹೆಣ್ಣಿನ ದಡ ಸೇರಿಸುವವನು ಎಂಬ ನಂಬಿಕೆಯನ್ನು ವ್ಯಂಗ್ಯಮಾಡುತ್ತಾರೆ. ನಿಜವಾದ ಅರ್ಥದಲ್ಲಿ ಹೆಣ್ಣು ಮತ್ತು ಗಂಡಿನ ನಡುವೆ ತಾದ್ಯಾತ್ಮವಿಲ್ಲದಿದ್ದರೆ ದಡ ಸೇರಲಾಗುವುದಿಲ್ಲ. ಹಾಗಾಗಿ ಪುರುಷ, ಸ್ತ್ರೀಯ ಜೊತೆಗಿದ್ದೇ ದಡ ಸೇರಬೇಕು. ಪ್ರಕೃತಿ–ಪುರುಷರ ನಡುವೆ ಸಹಚರ ಭಾವವಿದ್ದಾಗ ಬದುಕು ಸುಂದರವಾಗುತ್ತದೆ. ಇದೇ ಬದುಕಿನ ರಹಸ್ಯವಲ್ಲವೆ? ಅನುಚರ ಭಾವ ಬಿತ್ತುವುದರ ಮೂಲಕ ಈ ಜಗತ್ತು ಏನನ್ನು ಸಾಧಿಸಿಲ್ಲ. ಆ ಮೂಲಕ ಅದು ಸಾಧಿಸಿದ್ದು ಒಡೆಯ ಮತ್ತು ಗುಲಾಮನನ್ನು, ಮೇಲು ಮತ್ತು ಕೀಳನ್ನು; ಜೊತೆಗೆ ಒಂದಿಷ್ಟು ಗೊಂದಲಗಳನ್ನು ಮಾತ್ರ.

ಹೆಣ್ಣು ತನ್ನ ಸಮ ಅಲ್ಲ ಎಂಬ ಗಂಡಿನ ಮೊಂಡುತನವನ್ನು 'ಚಪ್ಪಲಿಗಳು' ಕವನದಲ್ಲಿ

ಕತ್ತಲೆಯ ಅಧೋ ಲೋಕದಿಂದ
ಅಮ್ಮ ಹಚ್ಚಿದ ದುಡಿಮೆಯ
ಕೈದೀವಿಗೆಯ ಬೆಳಕಿನಲ್ಲಿ
ಬಾಳ ದಾರಿಯ ಕಂಡು ನಡೆಯುತ್ತೇನೆ
ಸತ್ಯ, ನ್ಯಾಯಗಳ ಚಪ್ಪಲಿ ಮೆಟ್ಟಿ (ಚಪ್ಪಲಿಗಳು)

– ಎಂದು ಟೀಕಿಸುತ್ತಾರೆ. ಹೆಣ್ಣಿನ ನೋವು, ಒಂಟಿತನ ದೃಢ ನಿರ್ಧಾರಗಳ ಅರಿವಾಗದಿರುವುದು. ಸತ್ಯ, ನ್ಯಾಯ, ಪ್ರಾಮಾಣಿಕತೆಯನ್ನು ಆಧಾರವಾಗಿಟ್ಟುಕೊಂಡು ಹೆಣ್ಣು ಹೇಗೆ ಬದುಕು ಕಟ್ಟಿಕೊಳ್ಳುತ್ತಿದ್ದಾಳೆಂದರೆ ಹೆಣ್ಣಿನ ಶ್ರಮಕ್ಕೆ ಬೆಲೆಯಿಲ್ಲದ ಈ ಸಮಾಜದಲ್ಲಿ ಅಮ್ಮನ ದುಡಿಮೆಯ ಎನ್ನ ಮುನ್ನಡೆಸುವ ಕೈದೀವಿಗೆಯಾಗಿದೆ ಎನ್ನುತ್ತಾರೆ ಕವಿ. ಹೆಣ್ಣು ದುಡಿದು ಆರ್ಥಿಕವಾಗಿ ಸ್ವಾತಂತ್ರ್ಯವಾಗ ತೊಡಗಿದಂತೆ ಆಕೆ ತನ್ನನ್ನ ರಕ್ಷಿಸಿಕೊಳ್ಳುತ್ತಾಳೆ.

ದುರಂತವೆಂದರೆ ಈ ಆರ್ಥಿಕ ಸ್ವಾತಂತ್ರ್ಯ ಕೂಡ ಈ ಗಂಡಸಿನ ಜಾಲದಲ್ಲಿಯೇ ಸೃಷ್ಟಿಯಾಗಿದೆ! ಉತ್ಪಾದನಾ ಪದ್ಧತಿಯಿಂದ ಹೆಣ್ಣೇನೋ ಸ್ವಾತಂತ್ರ್ಯಳಾಗುತ್ತಾಳೆ. ಆದರೆ ಕೆಲವೊಮ್ಮೆ ಮೈಮರೆತರೆ ಅವಳ ಇಡೀ ಬದುಕೇ ಅಧಃಪತನಕ್ಕೆ ತಲುಪುತ್ತದೆ.

ಕವಿ ಮಲ್ಲಿಕಾ ರವರು ತಾನು ಹೆಣ್ಣಾಗಿ ಹುಟ್ಟಿದಕ್ಕೆ ಹೆಮ್ಮೆ ಪಡುತ್ತೇನೆ ಎನ್ನುತ್ತಾರೆ.

ಹೆಣ್ಣಾಗಿ ಹುಟ್ಟಿದ್ದಕ್ಕೆ
ಹೆಮ್ಮೆ ಪಡು
ಅವರಿವರು ಮೂಗು ಮುರಿದಿದ್ದನ್ನು
ಹುಬ್ಬು ಏರಿಸಿದ್ದನ್ನು
ಸುಣ್ಣದ ಬಟ್ಟಿಯಲ್ಲಿ
ನಿನ್ನ ಅದ್ದಿ ತೆಗೆದದ್ದನ್ನು
ಮರೆತು ಬಿಡು

(ಹೆಮ್ಮೆ ಪಡುತ್ತೇನೆ ಹೆಣ್ಣಾಗಿ ಹುಟ್ಟಿದ್ದಕ್ಕೆ)

ಹೆಣ್ಣು ಎಂಬ ಕಾರಣಕ್ಕಾಗಿ ನಿರಾಕರಣೆಗೆ ಒಳಗಾದದ್ದಕ್ಕೆ ಹತಾಶೆ ಪಡದೆ ತಾನು ಹೆಣ್ಣಾಗಿ ಹುಟ್ಟಿದ್ದಕ್ಕೆ ಹೆಮ್ಮೆ ಪಡುತ್ತಾರೆ. ಹೆಣ್ಣು ಪುರುಷನನ್ನು ಮುನ್ನಡೆಸುವ ಚಾಲಕ ಶಕ್ತಿಯು ಕೂಡ ಆಗಿದ್ದಾಳೆ. ಹುಟ್ಟಿದಾಗ ಹೆಣ್ಣು ಎಂದು ಕೇಳಿ ಇತರರು ಮೂಗು ಮುರಿಯುತ್ತಾರೆ. ಹುಟ್ಟಿನಿಂದಲೇ ಇದಕ್ಕೆಲ್ಲ ಹೆಣ್ಣು ತಲೆಕೆಡಿಸಿಕೊಳ್ಳಬಾರದು ಎಂದು ಕವಿ ಹೇಳುತ್ತಾರೆ.

'ರೊಟ್ಟಿ ಮತ್ತು ಹುಡುಗಿ' ಕವನ ಸಾಲುಗಳು ಹೀಗಿವೆ:

ಹೆಪ್ಪುಗಟ್ಟಿದ ಕತ್ತಲ ರಾತ್ರಿಯ
ಮಾಗಿಚಳಿ ತಬ್ಬಿ ಬಯಲ
ಬಾಗಿಲಿನಿಂದ ಸರಿದು ಬರುವ
ಸಿಳ್ ಗಾಳಿಯ ಕಂಪನ ಹುಟ್ಟಿಸಿತು
ಹರಿದ ಸೀರೆಯಲಿ ಹುಡುಗಿಗೆ

ಹೆಣ್ಣಿಗೆ ಪ್ರೀತಿ ನಿರಂತರ ಹಸಿವಾಗಿ ಕಾಡುತ್ತದೆ. ಹಸಿವು ಮತ್ತು ರೊಟ್ಟಿಯ ಸುತ್ತಲ ಪ್ರಪಂಚವನ್ನು ಅನುಭವ ಮತ್ತು ಅನುಭಾವದ ನೆಲೆಯಲ್ಲಿ ಹಿಡಿದಿಡುತ್ತಾರೆ. ಹಸಿವು ಮತ್ತು ರೊಟ್ಟಿಯನ್ನು ಬಂಡವಾಳವಾಗಿ ಮಾಡಿಕೊಂಡು ನಡೆಯುತ್ತಿರುವ ಸಾಮಾಜಿಕ ಮತ್ತು ರಾಜಕಾರಣದ ಚಲನೆಯನ್ನು ಕವಯಿತ್ರಿ ಅವರು ಅತ್ಯಂತ ಸಮರ್ಥವಾಗಿ ವಿಡಂಬಿಸಿದ್ದಾರೆ. ಈ ಕೃತಿಯ ಉದ್ದಗಲಕ್ಕೂ ಹಸಿವು ಮತ್ತು ರೊಟ್ಟಿ ಸಮಾಜದ ಸ್ಥಿತ್ಯಂತರಗಳಿಗೆ,

ಬದಲಾವಣೆಗಳಿಗೆ ಹೇಗೆ ಕಾರಣೀಭೂತವಾಗುತ್ತದೆ ಎಂಬುದನ್ನು ಖಂಡ ತುಂಡವಾಗಿ ಖಂಡಿಸುವಲ್ಲಿ ಕವಯಿತ್ರಿ ಅವರ ಬಂಡಾಯದ ಧೋರಣೆಯನ್ನು ಕಾಣಬಹುದು. ಅವರ ಈ ಕೆಳಗಿನ ಕವನ ಅಂತಹ ಆಶಯವನ್ನೇ ಧ್ವನಿಸುತ್ತದೆ.

ಬಂದವರು ಹೋದವರು ತಿಂದವ
ರು; ಸರಿದು ಹೋಗುವಾಗ ಕೇಳುವುದು
ಹುಡುಗಿಯ ಜೀವ 'ನನ್ನ ಕಿಚ್ಚಿಗೆ ಮೈಕಾಯಿಸಿ
ಕೊಂಡ; ನೀವು ಆರಿ ತಣ್ಣಗಾಗುವುದೆಂದು'

(ರೊಟ್ಟಿ ಮತ್ತು ಹುಡುಗಿ)

ಮಲ್ಲಿಕಾ ಘಂಟಿಯವರ ಆಧುನಿಕ ಕಾಲದ ಅರಿವು ಪುರಾಣ ಪ್ರಜ್ಞಾ ಪಾತಳಿಯನ್ನು ಮೀರುತ್ತ ಹೊಸ ನೆಲೆಯ ಹುಡುಕಾಟದಲ್ಲಿರುವುದನ್ನು ಕಾಣಬಹುದು ಅವರು ಹೀಗೆ ಬರೆಯುತ್ತಾರೆ :

ಹೆಂಡತಿಯ ಮಾರುವ
ಗಂಡಸರೈವರಲ್ಲಿಯೂ ಪಾಂಚಾಲಿಗೆ
ಕರ್ಣನ ಉಕ್ಕಿನೆದೆಯಲ್ಲಿ ಕರಗುವ
ಕೆಂಡದುಂಡೆಯ ಕಣ್ಣಲ್ಲಿ ಚೆಚ್ಚಗಾಗುವ ಬಯಕೆ

(ತೀರದ ಬಯಕೆ)

ಹೆಣ್ಣಿನ ಮನಸ್ಸನ್ನು ವಿಛಿದ್ರಗೊಳಿಸಿದ ಸಂಗತಿಗಳನ್ನು ಹೊಸ ದಾರಿಯನ್ನು ತುಳಿದು ಹಳೆಯದನ್ನ ಮರೆಯುವ ಶಕ್ತಿಯನ್ನು ಹೆಣ್ಣು ಬಯಸುತ್ತಾಳೆ. ನೆನಪಿನ ಬುತ್ತಿಯಲ್ಲಿ ಬಿದ್ದು ಕೊಳೆತುಹೋಗಬಾರದೆಂಬ ಎಚ್ಚರವನ್ನು ನೀಡುತ್ತಾರೆ. ಅದು ಎಲ್ಲರಿಗೂ ಅಗತ್ಯವಾಗಿದೆ.

"ಬಂದು ಹೋಗುವ
ಹೃದಯದಲ್ಲಿ ಅವನಿಟ್ಟು ಹೋಗಿದ್ದಾನೆ
ನೆನಪಿನ ಪಿಂಡವ
ಎಲ್ಲಿ ಹುಗಿದು ಹೋಗಲಿ ಅದನು"

(ನೆನಪು)

ಇದು ಸಹೃದಯರನ್ನು ಗಾಯಗೊಳಿಸುತ್ತದೆ. ಹೆಣ್ಣಿಗೆ ನೈತಿಕ ಬೆಂಬಲವನ್ನು ಕವಿ ನೀಡುತ್ತಾರೆ. ಹೊಸ ಹೊಸ ಆಲೋಚನೆಯ ಮೂಲಕ ತಮ್ಮನ್ನ ತಾವು ತೆರೆದುಕೊಂಡು ಹೆಣ್ಣು ಛಲಗಾತಿ ಎಂದು ತಿಳಿಸುತ್ತಾರೆ.

ಒಂದು ರೀತಿಯ ದ್ವಂದ್ವದಲ್ಲಿ ಬದುಕು ನಡೆಯುತ್ತಿದೆ. ನೋವಿನಿಂದಾಗಿ 'ಬಿಡಬೇಕು' ಎನ್ನುವಂಥದ್ದು ಜೀವಸೆಲೆಯಿಂದಾಗಿ ಇರಬೇಕು ಎನಿಸುತ್ತದೆ.

ಮತ್ತೆ ಅದೇ ನಿರಾಶೆ

"ಪ್ರೀತಿಯ ಗೋರಿಯ ಮುಂದೆ
ಎದೆ ಒಡೆದು ಸತ್ತವರ
ಹೆಸರು ನೆನಪಿಸಿಕೊಳ್ಳುವುದು
ವ್ಯರ್ಥ
ನೆನಪಿನ ಕಿಚ್ಚಿನಲ್ಲಿ
ನಡೆದು ಬರುವ
ಹುಚ್ಚು ನಿರಂತರ"

(ಹುಚ್ಚು)

ಜೀವನ ಸಾಗುವ ಪರಿಯನ್ನು ಕವಿ ಹೀಗೆ ತಿಳಿಸುತ್ತಾರೆ. ನಾಗರಿಕ ಸಮಾಜದಲ್ಲಿ ಬದುಕಿನ ನಿರ್ದೇಶನ ಬಹಳ ಮುಖ್ಯ.

ಸಾಮಾಜಿಕ ಬದಲಾವಣೆಯನ್ನು ಆಶಯವನ್ನಾಗಿಟ್ಟುಕೊಂಡಿರುವ ಮಲ್ಲಿಕಾ ಘಂಟಿಯವರು ಹೆಣ್ಣು ಬದುಕಿಗಾಗಿ ಹೇಗೆ ಹಂಬಲಿಸುತ್ತಾಳೆ; ಗಂಡು ಹೇಗೆ ಹೆಣ್ಣಿನ ಭಾವನೆಗಳನ್ನು ಹೊಸಕಿ ಹಾಕುತ್ತಿದ್ದಾನೆ ಎಂಬುದನ್ನು ಕಾಣುತ್ತಿದ್ದಾರೆ. ತನ್ನ ಬದುಕನ್ನು ಕಟ್ಟಿಕೊಳ್ಳಲು ಆಕೆ ಪಡುವ ಪಡಿಪಾಡಲು ಅಷ್ಟಿಷ್ಟಲ್ಲ.

ಸುಂದರವಾದ ಕಾರಿನ
ಸ್ಟಿಯರಿಂಗ್ ಹಿಡಿದ
ಕಾಲಿಲ್ಲದ
ಹೆಳವ

(ಸತ್ಯ–೨)

ಈ ಕವನವು ರಾಜಕಾರಣವನ್ನು ಕುರಿತಂತೆ ಚದುರಂಗ ಆಟದ ಒಳಮರ್ಮಗಳನ್ನು ಬೆತ್ತಲೆ ಮಾಡುವ ರೀತಿಯಲ್ಲಿ ಇಲ್ಲಿನ ಸಾಲುಗಳು ಮೈದಳೆದಿವೆ;

ಬದುಕು ದುಬಾರಿ ಇಲ್ಲಿ
ಸಾವು ಸಸ್ತಾ ನೋಡಿ
ಎಂದಿನಿಂದಲೂ ಸುನ್ನೆರಿ

ಬಳಿಯುತ್ತಲೇ ಬಂದಿದ್ದೇವೆ
ಅನ್ನಗೊತ್ತಿಲ್ಲದ ಜನರಿಗೆ ಚಿನ್ನ ತೋರಿಸುತ್ತ
(ಸೈನಿಕರ ಸಾವೂ ಮತ್ತು ಓಟು ಬ್ಯಾಂಕು)

ಅಧಿಕಾರದಲ್ಲಿದುಕೊಂಡು ಸಾಮಾನ್ಯ ಜನರನ್ನು ಸಾವಿಗೆ ನೂಕುವ ರಾಜಕಾರಣಿಗಳು, ಅಧಿಕಾರಸ್ಥರು, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಜನಸಾಮಾನ್ಯರ ನೈತಿಕತೆಯನ್ನು ಮತ್ತು ಸಂಪತ್ತನ್ನು ಕೊಳ್ಳೆ ಹೊಡೆಯುತ್ತಿರುವ ಮಂದಿಯನ್ನು ಶೋಷಣೆ ಮಾಡುವ ಇಂತಹವರನ್ನು ಕುರಿತು ಕವಿ ಬಂಡಾಯವೆದ್ದಿದ್ದಾರೆ. ಇಲ್ಲಿ ಬರುವ ಮಂದಿಗೆ ಇತಿಹಾಸದಲ್ಲಿ ದಾಖಲಾಗುವ ಬಗ್ಗೆ ತಿರಸ್ಕಾರವಿದೆ. ಇವರು ಸಾವಿನ ದವಡೆಗೆ ನೂಕುವವರು, ಬದುಕು ನಡೆಸುವುದು ಮಾತ್ರ ಬಹಳ ಕಷ್ಟವಾಗಿದ್ದು ಸಾಯಲು ಮಾತ್ರ ಕಷ್ಟಪಡಬೇಕಾಗಿಲ್ಲ ಎಂದು ತಮ್ಮ ಮನದಾಳದ ಇಂಗಿತವನ್ನು ಕವಿ ತಿಳಿಸುತ್ತಾರೆ.

ಬಂದರು ಬಿಕ್ಷುಕರಂತೆ
ತ್ರಿಮೂರ್ತಿಗಳೋ ಚತುರ್ಮುಖ ಬ್ರಹ್ಮರೋ
ಗಂಡಸರು ಭೂಮಿಗೆ
ಕೈಯಲ್ಲಿ ಭಿಕ್ಷಾಪಾತ್ರೆ ಬಗಲಲ್ಲಿ ಹರಿತ ಚೂರಿ
(ಎಷ್ಟೊಂದು ವೇಷ ಎಷ್ಟೊಂದು ಮೋಸ)

ಹೆಣ್ಣು ಶತಮಾನಗಳಿಂದಲೂ ಶೋಷಣೆಗೆ ಒಳಗಾದವಳು. ಹೆಣ್ಣಿನ ಬದುಕಿನ ನಿರ್ದೇಶನ ಪುರುಷಾಧೀನಗೊಂಡಿದೆ. ಸ್ತ್ರೀಯ ಬಗೆಗಿನ ಸ್ಥಾನ-ಮಾನ ಉನ್ನತಮಟ್ಟದ್ದೇ ಆದರೆ ಇಂದು ಪುರುಷ ಕೈಯಲ್ಲಿ ಆಯುಧ ಹಿಡಿದು ಅವರ ಮಾನವನ್ನು ಹಿರಿದು ಕೊಲ್ಲುತ್ತಿದ್ದಾನೆ. ಹೆಣ್ಣಿನ ಬಳಿ ಬರುವಾಗ ಭಿಕ್ಷುಕರಂತೆ ಬಂದ ಪುರುಷ ಕೈಯಲ್ಲಿ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಬಗಲಲ್ಲಿಯೇ ಹರಿತವಾದ ಆಯುಧವಾದ ಚೂರಿಯನ್ನು ಇಟ್ಟಿರುತ್ತಾನೆ. ಈತನನ್ನು ನಂಬಿ ಹೋದ ಹೆಣ್ಣಿನ ಸ್ಥಿತಿ ದಯಾನೀಯವಾಗಿರುವಂತಹದು ಎಂದು ಇಂತಹ ಪುರುಷ ಸಂತತಿ ವಿರುದ್ಧ ಮಲ್ಲಿಕಾ ಘಂಟಿ ತಮ್ಮ ಬಂಡಾಯ ಧ್ವನಿಯನ್ನು ಎತ್ತಿದ್ದಾರೆ.

'ಬೆಲ್ಲದಚ್ಚು ಮತ್ತು ಇರುವೆ ದಂಡು' ಕವನ ಸಂಕಲನದಲ್ಲಿ ಬಂಡಾಯ ಧ್ವನಿಯು ಪ್ರಖರವಾಗಿರುವುದನ್ನು ಕಾಣಬಹುದು. 'ಹೊಳೆ ಮತ್ತು ನಾನು', 'ಶಿವೆಯೊಲುಮೆಯ ಭಾವದೂರು....' 'ನೀವು ಮತ್ತು ನಾನು', 'ಒಂಟಿ ಹಕ್ಕಿಯ ಹಾಡು', 'ತಲೆಮಾರುಗಳ ಸುಟ್ಟಗಂಟು', 'ಮೌನ', 'ಬಯಲು-ಆಲಯ', 'ಬತ್ತಲಾರದ ಕಣ್ಣೀರು', 'ಮಾರ್ಜಾಲರು', 'ನಿವೇದನೆ', 'ಹೊಸವರುಷ', 'ಅರಿವು', 'ನಾಯಿಬೋರ್ಡ್', 'ಮನೆಯೆಂಬ ಹುತ್ತದೊಳಗೆ' –

ಹೀಗೆ ಒಟ್ಟು ೪೨ ಕವನಗಳನ್ನು ಒಳಗೊಂಡಿರುವ ಈ ಸಂಕಲನದಲ್ಲಿ ಬರುವ ಕವನಗಳು ಮಲ್ಲಿಕಾರವರ ಬದುಕಿನಲ್ಲಿ ನಿರಂತರವಾಗಿ ಕಾಡಿದ ಕೌಟುಂಬಿಕ ಆಸರೆಯ ನಿರೀಕ್ಷಿತ ಒಲವಿನ ಆಸರೆ, ಬದುಕಿನ ಪ್ರೀತಿ, ಸಾಮಾಜಿಕ ತಲ್ಲಣಗಳು ಸಂಪುಟವಾಗಿ ಕಂಡುಬರುತ್ತದೆ.

ಕಿಚ್ಚನೆ ಹೊತ್ತುಕೊಂಡು
ಪೂಜೆಯ ಮಾಡಲು ಬಯಲ
ಬತ್ತಲೆಗೆ ಬಗೆಬಗೆಯ ಬಣ್ಣ
ಮೇಲೆ ಸಾಯದೆ ನೋಯದೆ ನಿಂತಿದೆ.
..................................................
..................................................
ಸಾಸಿವೆಯ ಸುಖಕ್ಕೆ ಸಾಗರಬಿದ್ದು
ದುಃಖ ಸಾಗರದಪ್ಪುಗೆಯೊಳಗೆ ಬಂದ
ಈ ಬದುಕು ಈ ಜೀವ ಹೀಗಿದೆ
ಧರಣಿಗೆ ನಿದ್ರೆಯಿಲ್ಲದಂತೆ
(ಧರಣಿಗೆ ನಿದ್ರೆ ಇಲ್ಲ)

ಒಂದು ದಿನದ ಸಂತೋಷಕ್ಕಾಗಿ ಇಡೀ ಬದುಕನ್ನೇ ಅಧೋಗತಿಗೆ ತಳ್ಳುವ ಈ ಜನ, ಹೆಣ್ಣಿನ ಅನುಭವವನ್ನು ಕೆದಕಿ, ಕೆದಕಿ ನೋಡುವ ಕುತೂಹಲದಿಂದ ಅವಳನ್ನು ಕಷ್ಟಕ್ಕೆ ನೂಕಿ ತಳ್ಳುವ ಹುನ್ನಾರ, ಬದುಕಿನ ಸತ್ಯದ ಕಾಠಿಣ್ಯವನ್ನು ಆರೋಗ್ಯಕರವಾಗಿ ಸ್ವೀಕರಿಸುವ ನಿಲುವನ್ನು ಈ ಕವನದಲ್ಲಿ ಕಾಣಬಹುದು.

ಅಪಮಾನವನ್ನು ಹಸಿವನ್ನು
ಹೇಗೆಂದು ದೂಷಿಸಲು ನಾನು
ಅಪಮಾನವೇ ನನ್ನ ಒಡಹುಟ್ಟಿದೊಲುಮೆ
ಹಸಿವೆಯ ಬೆನ್ನೇರಿಯೆ ನಾ ಚಿಳಿಕೆ
..............................................
..............................................
ಹಸಿದ ಹೊಟ್ಟೆಯ ಮುಂದೆ ಪೇರಿಸಿಟ್ಟ
ಸರಕಾರದ ಸಾಲಮೇಳದ ಹೋಳಿಗೆಯ ಸಾಲು
(ಬೆಲ್ಲದಚ್ಚು ಮತ್ತು ಇರುವೆ ದಂಡು)

ಹೆಣ್ಣಿಗೆ ಲೈಂಗಿಕ ಸ್ವಾತಂತ್ರ್ಯದ ಮೂಲಕ ಸಮಾನತೆ ಸಾಧಿಸಲು ಸಾಧ್ಯವಿಲ್ಲ. ಆ ಸ್ವಾತಂತ್ರ್ಯವನ್ನು ಆಕೆಯ ಆಯ್ಕೆಗೆ ಬಿಟ್ಟಾಗ ಬಹುಶಃ ಅದು ಸಾಧ್ಯವಾಗಬಹುದೇನೋ ಹಸಿವನ್ನು, ಅಪಮಾನವನ್ನು ಕೇಂದ್ರವಾಗಿರಿಸಿಕೊಂಡು ಬರೆದ ಈ ಕವನ ಹಸಿವು ಈ ಸಮಾಜವನ್ನು ಒಂದು ಕಡೆ ಕಾಡುತ್ತಿದ್ದರೆ, ಮತ್ತೊಂದು ಕಡೆ ಅಪಮಾನ ಕಾಡುತ್ತಿದೆ ಎಂಬುದನ್ನು ಸೆರೆ ಹಿಡಿದಿದ್ದಾರೆ. ಎಷ್ಟು ತಿಂದರೂ ಮುಗಿಯದ ಹಸಿವು. ಎಷ್ಟೇ ನ್ಯಾಯಯುತವಾಗಿ ನಡೆದರೂ ಅಪಮಾನಿಸಲೆಂದೇ ಇರುವ ಈ ಸಮಾಜ ಇವುಗಳನ್ನು ಈ ಕವನ ಧ್ವನಿಸುತ್ತಿದೆ.

ಶೂದ್ರನ ತಪಸ್ಸಿಗೆ ಬ್ರಾಹ್ಮಣನ ಸಾವೆಂದು ತೊಳ್ಳೆ ಅದುರಿದ
ಗುಳ್ಳೆ ನರಿಗಳು ಪ್ರಭುವಿನ ಮುಂದೆ ಕಣ್ಣೀರು ಸುರಿಸಿ
ಕೊಲ್ಲಿಸಿದ್ದಾವೆ ಶಂಭೂಕನ
ಅಕ್ಷರವಿದ್ಯೆ ಬಚ್ಚಿಟ್ಟ ಸ್ವಯಂಭೂಗಳ ಕಂಡು
ಬೆಚ್ಚಿಬಿದ್ದು ಹೆಬ್ಬೆರಳ ಕತ್ತರಿಸಿದ ಬ್ರಹ್ಮಪುತ್ರರು ಜಗತ್ ವಂದ್ಯರು
(ನಿಲ್ಲಿರಿ ನಾನು ಬರುವೆ ಡರ್ಬಾನಿಗೆ.....)

ಈ ಕವನವು ಪುರಾಣದ ಹಿನ್ನಲೆಯ ಪ್ರಜ್ಞೆಯನ್ನೊಳಗೊಂಡಿದ್ದು ವರ್ಗ, ವರ್ಣದ ವಿಚಾರವನ್ನು ಪಟ್ಟಭದ್ರ ನೆಲೆಗಳು ಹೇಗೆ ಕಳಚುತ್ತಿದ್ದಾವೆ ಎಂಬುದನ್ನು ಜನಸಾಮಾನ್ಯರಿಗೆ ಮುಟ್ಟುವ ರೀತಿಯಲ್ಲಿ ಕವಿ ಹೇಳಲು ಹೊರಟಿದ್ದಾರೆ. ಶೋಷಣೆ ಎಂಬುದು ಇಂದು ನಿನ್ನೆಯದಲ್ಲ ಅದು ಶತಶತಮಾನಗಳಿಂದ ಬಂದಿದೆ ಎಂದು ಅದರ ವಿರುದ್ಧ ಕವಿ ಚಾಟಿ ಬೀಸಿದ್ದಾರೆ. ಈ ಕವನದ ಮೂಲಕ ಚರಿತ್ರೆಯ ಪರಿಶೀಲನೆಯಲ್ಲಿ ತೊಡಗಿದ್ದಾರೆ.

ಎಲ್ಲವನ್ನೂ ಸಮಚಿತ್ತದಿಂದ ಸ್ವೀಕರಿಸುವ ಮಲ್ಲಿಕಾ ಘಂಟಿಯವರು ಬಹಳ ಸೂಕ್ಷ್ಮವಾದ ವಿಚಾರಗಳನ್ನು ನಮ್ಮ ಮುಂದಿಡುತ್ತಾರೆ.

ಹಾದರದ ಚಾದರದೊಳಗೆ ಸತ್ಯದ ಶಿಲುಬೆ ಹೊತ್ತು
ತಲೆಯ ಮೇಲೆ ಶಿವೆಯೊಲುಮೆಯ ಒಯ್ಯುತ್ತಿರುವೆ
ಭಾವದೂರಿಗೆ ಮನಮೆಚ್ಚಿದವನೊಡಗೂಡಿ
ಬದುಕಲೆಂದು ಪ್ರೀತಿ ಪ್ರೇಮ ಪ್ರಣಯಕ್ಕೆ ಸಾಕ್ಷಿಯಾಗಿ
(ಶಿವೆಯೊಲುಮೆಯ ಭಾವದೂರು)

ಇದೊಂದು ದಾಂಪತ್ಯ ಗೀತೆಯಂತಿದ್ದು, ಇದರ ಅರ್ಥ ಸುಲಭವಾಗಿ ಗ್ರಹಿಸಲಾಗುವುದಿಲ್ಲ. ಹೆಂಡತಿ ಇನಿಯಳಲ್ಲವಾದರೆ, ಗಂಡನೂ ಇನಿಯಲಾಗಲಾರ ಎಂಬುದು

ಅರಗಿಸಿಕೊಳ್ಳಲಾಗದ್ದು. ಇಂತಹಗಳನ್ನು ಬಹಳ ಸೂಕ್ಷ್ಮವಾಗಿ ಹೇಳುವ ಛಾತಿ ಕವಿಗೆ ಬಂದಿದೆ.

'ಒಂಟಿ ಹಕ್ಕಿಯ ಹಾಡು' ಕವನವು ಏಕಾಂತದ ಜೀವನವನ್ನು ಕವಿ ಬಯಸುತ್ತಿದ್ದಾರೆ ಎನಿಸುವಂತಿದೆ.

ಒಂಟಿತನವು ಬದುಕಲ್ಲಿ ವರವಾಗಲಿ
ಅಕ್ಕನ ಬಳಗದ ಗಿಳಿಕೋಗಿಲೆಗಳು
ಜತೆಯಾಗಿರಲು ವಿರಹದುರಿಯ ಝಳ
ತಾಗದಂತೆ ಚೆನ್ನಮಲ್ಲಿಕಾರ್ಜುನ ನೆರಳಾಗಿರಲಿ
(ಒಂಟಿ ಹಕ್ಕಿಯ ಹಾಡು)

ಎನ್ನುವ ಕವಿ ತನ್ನ ಸಾಧನೆಗೆ ಅಡ್ಡಿಯಾಗಿರುವ ಇತರರಿಂದ ಸೆರೆಬಿಡಿಸಿಕೊಂಡು ಸ್ವತಂತ್ರ ವಿಚಾರಗಳನ್ನು ಹೊರಹಾಕಲು, ಪುರುಷ ಪ್ರಧಾನ ಸಂಸ್ಕೃತಿಯ ಅಹಮ್ಮಿಕೆಯನ್ನು ನಿರಸನಗೊಳಿಸಿ ಸಾಧನೆಯ ಮಾರ್ಗದಲ್ಲಿ ಸಿದ್ಧಿಯೆಡೆಗೆ ನಡೆಯಲು ಒಂಟಿತನ ಬಯಸಿದ್ದಾರೆ.

'ನಾಯಿ ಬೋರ್ಡ್' ಕವನದಲ್ಲಿ ಹರಿತವಾದ ವ್ಯಂಗ್ಯದಿಂದ ಶೋಷಣೆ ಮಾಡುವವರನ್ನು ವಿಡಂಬಿಸುತ್ತಾರೆ.

ಹಾದಿಬೀದಿಯ ನಾಯಿಗಳು
ಒಳಗೆ ಬಂದು ಕೆಂಡ
ಸಂಪಿಗೆಯ ಮರಕ್ಕೆ ಕಾಲು
ಎತ್ತಿ ಉಚ್ಚೆ ಹೊಯ್ಯದಂತೆ
(ನಾಯಿ ಬೋರ್ಡ್)

ಸ್ತ್ರೀಯರು ತಮ್ಮ ಮನೆಗಳಲ್ಲಿ ಬೆಳಗಿನ ಜಾವ ಸುರಕ್ಷಿತವಾಗಿರಲು ಮನೆಯ ಗೇಟಿನ ಮುಂದೆ 'ನಾಯಿ ಇದೆ ಎಚ್ಚರಿಕೆ' ಎಂಬ ಬೋರ್ಡ್ ನೇತು ಹಾಕಿರುತ್ತಾರೆ. ಏಕೆಂದರೆ ಬೀದಿ ನಾಯಿಗಳು ಒಳಗೆ ಒಂದು ಬಿಡುತ್ತವೆಂದು. ಹಾಗೆ ಲೋಕಕ್ಕೆ ಹೆಣ್ಣನ್ನು ಬಂಧಿಸುವ ಕರಿಮಣೀ ತಾಳಿ, ಕಾಲುಂಗರವನ್ನು ನೆನಪಿಸಿ ಬೆಚ್ಚಿಬೀಳುವಂತೆ ಮಾಡುತ್ತಾರೆ.

ಭ್ರಷ್ಟತೆಯನ್ನು ಕುರಿತು 'ನಿವೇದನೆ' ಕವಿತೆಯಲ್ಲಿ ಮಲ್ಲಿಕಾ ಘಂಟಿಯವರು ದುಷ್ಟರಿಂದ ಈ ನಾಡನ್ನು ರಕ್ಷಿಸಬೇಕೆನ್ನುತ್ತಾರೆ.

ಓ ಕಾಲವೇ
ಮೇವು ತಿಂದವರರಿಂದ ಗೊಬ್ಬರ
ಮೆಲುಕಾಡಿಸಿದವರಿಂದ
ಬಾಂಬು ಬಂದೂಕು
ತಿಂದವರಿಂದ ಶವಪೆಟ್ಟಿಗೆಯ
ನುಂಗುವವರಿಂದ
ನಾಮಧಾರಿ ತ್ರಿಶೂಲ ಹಿಡಿದ
ಕುಂಕುಮಾಂಕಿತರಿಂದ
ರಕ್ಷಿಸು ಈ ನಾಡನ್ನು

(ನಿವೇದನೆ)

ಈ ಕವಿತೆಯಲ್ಲಿ ಈ ದೇಶದ ರಾಜಕಾರಣಿಗಳು, ಲಂಚ, ಭ್ರಷ್ಟಾಚಾರಗಳಿಂದ ಹೊಟ್ಟೆ ತುಂಬಿಸಿಕೊಂಡು ಇಡೀ ದೇಶವನ್ನೇ ಮಾರಲು ಹೊರಟಿದ್ದಾರೆ. ಇಂತಹ ಭ್ರಷ್ಟರಿಂದ ಈ ದೇಶವನ್ನು ಬಿಡಿಸಿಕೊಳ್ಳಬೇಕೆಂಬ, ಒಂದು ಪರ್ಯಾಯ ಸಮಾಜವನ್ನು ನಿರ್ಮಾಣ ಮಾಡಬೇಕೆಂಬ ಹಂಬಲವಿದೆ. ಮೇವು ಹಗರಣದಿಂದ ರಾಸಾಯನಿಕ ಗೊಬ್ಬರಗಳ ಪ್ರಕರಣದಿಂದ, ಅಣ್ವಸ್ತ್ರಗಳ ಖರೀದಿಯಿಂದ, ಹೆಲಿಕ್ಯಾಪ್ಟರ್‌ಗಳ ಖರೀದಿಯಿಂದ ಲಂಚ ಪಡೆದ ಈ ಭ್ರಷ್ಟರು, ರಾಜಕಾರಣಿಗಳು ಇವರಿಂದ ಈ ದೇಶವನ್ನು ರಕ್ಷಿಸಬೇಕಾಗಿದೆ. ಸೈನಿಕರ ಶವ ಪೆಟ್ಟಿಗೆಯನ್ನು ಖರೀದಿಸುವಲ್ಲಿಯೂ ಇವರು ಲಂಚವನ್ನು ತಿನ್ನುತ್ತಿದ್ದಾರೆ. ಇಂತಹವರಿಂದ ಈ ದೇಶವನ್ನು ನಾಡನ್ನು ರಕ್ಷಿಸಬೇಕು ಎಂದು ಕವಿ ತಮ್ಮ ಆಶಯ ವ್ಯಕ್ತಪಡಿಸುತ್ತಾರೆ.

ಕಳೆದ ವರುಷ ಛಿದ್ರಗೊಂಡ
ಕನಸು ಮನಸುಗಳ
ಚೂರು ಪಾರುಗಳು ಮನೆ
ತುಂಬ ಮನ ತುಂಬ
ಹರಡಿಕೊಂಡಿವೆ. ಗೂಡಿಸಿ
ಹಾಕುವ ಭೂತದೊಳಗೆ
ಬರುವೆಯಂತೆ ವರ್ತಮಾನದ
ಭರವಸೆಗಳ ಹೊತ್ತು

(ಹೊಸ ವರುಷ)

'ಹೊಸ ವರುಷ' ಕವಿತೆಯಲ್ಲಿ ಹೊಸತನವನ್ನು ಕಾಣಬೇಕೆಂಬ ಉತ್ಸಾಹ ಕವಿಗೆ ಇದೆ. ಹೊಸ ವರುಷವನ್ನು ಬಹಳ ಸಂತೋಷದಿಂದ ಸ್ವಾಗತಿಸುವ ಕವಿ. ಭೂತದ ಘಟನೆಗಳಿಂದ ಛಿದ್ರಗೊಂಡ ಈ ಮನಸ್ಸಿಗೆ ಹೊಸ ವರುಷ ಹೊಸತನವು ಮೂಡಬೇಕೆಂಬ ಹಂಬಲವಿದೆ. ನವವರುಷವನ್ನು ಬಹಳ ಕುತೂಹಲ ಇಟ್ಟುಕೊಂಡು ನೋಡುತ್ತಾ ಭೂತದ ಬಗ್ಗೆ ಚಿಂತಿಸದೆ ಹೊಸ ವರುಷದ ಬಗ್ಗೆ ಭರವಸೆಯನ್ನು ಮೂಡಿಸಿಕೊಳ್ಳಬೇಕು ಎಂಬ ಆಶಯವನ್ನು ಈ ಕವಿತೆಯಲ್ಲಿ ಕಾಣಬಹುದು.

ಸ್ತ್ರೀ ಸ್ವಾತಂತ್ರ್ಯದ ಒಳ ಅರಿವನ್ನು ಕಟುವಾಗಿ ತಿಳಿಸುವ ಮಲ್ಲಿಕಾ ಘಂಟಿಯವರು ವಾಸ್ತವತಾವಾದಿ ಮತ್ತು ಪರ್ಯಾಯ ಸಮಾಜದ ಕಲ್ಪನೆಯನ್ನು ಇಟ್ಟುಕೊಂಡು ಬರೆಯುತ್ತಿರುವ ಲೇಖಕಿ. ಈ ಸಮಾಜದಲ್ಲಿರುವ ಅನ್ಯಾಯ, ಅಸಮಾನತೆ, ಅರಾಜಕತೆ, ಭ್ರಷ್ಟಾಚಾರ, ಲಂಚಗುಳಿತನ, ಸ್ತ್ರೀ ಶೋಷಣೆ, ಅತ್ಯಾಚಾರ, ಸುಲಿಗೆ, ಇವುಗಳಿಂದ ಜರ್ಜರಿತವಾಗಿರುವ ಸಮಾಜವನ್ನು ಮಾನವೀಯತೆಯ ಕಡೆಗೆ ಕರೆದುಕೊಂಡು ಹೋಗಲು ಪರ್ಯಾಯ ಸಮಾಜ ನಿರ್ಮಾಣ ಮಾಡಬೇಕೆಂಬ ಕನಸನ್ನು ಹೊಂದಿರುವವರು.

ಮಲ್ಲಿಕಾ ಘಂಟಿಯವರು ತಮ್ಮ ಕವಿತೆಗಳ ಮೂಲಕ ಶೋಷಿತ ಸಮುದಾಯವನ್ನು ಸರಿದಾರಿಗೆ ಕರೆತರಲು ಕೈ ಹಿಡಿದು ನಡೆಸಬೇಕೆಂಬ ಹಂಬಲವನ್ನು ಹೊಂದಿ, ತಮ್ಮ ಕವಿತೆಗಳಲ್ಲಿ ಬಂಡಾಯದ ಧ್ವನಿಯನ್ನು ಎತ್ತುವ ಮೂಲಕ ಸಮಾನತೆಯನ್ನು ತರುವ ಆಶಯದೊಂದಿಗೆ ಒಂದು ಸಾಂತ್ವನವನ್ನು ಹೇಳಿ ಎಡಪಂಥೀಯ ಚಿಂತನೆಗಳ ಮೂಲಕ ವಿಭಿನ್ನ ಹೆಜ್ಜೆಗಳನ್ನು ಇಡುತ್ತಿದ್ದಾರೆ.

**ನಾಟಕ ಕೃತಿಗಳು**

ಹೊಸಗನ್ನಡ ಸಾಹಿತ್ಯದಲ್ಲಿ ನಾಟಕ ವಿಶಿಷ್ಟವಾದ ಸಾಹಿತ್ಯಕ ಪ್ರಕಾರ. ಸಂಸ್ಕೃತದಲ್ಲಿ ನಾಟಕ ರಚನೆ ಬಹಳವಿದ್ದರೂ ಕನ್ನಡದಲ್ಲಿ ೧೬–೧೭ನೇ ಶತಮಾನದ ತನಕ ನಾಟಕ ಪ್ರಕಾರ ಬೆಳೆಯಲಿಲ್ಲ. ಇದಕ್ಕೆ ಕಾರಣ ಏನು? ಎಂಬುದು ಅನೇಕರ ಜಿಜ್ಞಾಸೆ. ಕನ್ನಡ ಸಾಹಿತ್ಯ ರಚನೆ ಪ್ರಾರಂಭದ ಹೊತ್ತಿಗೆ ಸಂಸ್ಕೃತದಲ್ಲಿ ನಾಟಕ ರಚನೆ ಕಡಿಮೆಯಾಗಿ ಕಾವ್ಯ ರಚನೆಯ ಕಡೆಗೆ ಅವರ ಗಮನ ನೆಟ್ಟಿತ್ತು. ಸಾಮಾನ್ಯ ಜನರಿಗೆ 'ಜನಪದ ರಂಗಭೂಮಿ' ಇದ್ದು ಅದು ಜನರ ಆಶೋತ್ತರಗಳನ್ನು ಬಿಂಬಿಸುತ್ತಿತ್ತು. ವಿದ್ವಾಂಸರಿಗೆ ನಾಟಕಗಳು ಇದ್ದವು. ರಾಜರ ಆಸ್ಥಾನದಲ್ಲಿ ನಾಟಕಗಳು ಪ್ರಾಮುಖ್ಯತೆ ಪಡೆದಿದ್ದವು. ಕನ್ನಡ ಕವಿಗಳ ಕಾವ್ಯದಲ್ಲಿ 'ನಾಟಕೀಯ ಅಂಶವನ್ನು' ಕಾಣುತ್ತೇವೆ. ಆದ್ದರಿಂದ ನಾಟಕದ ಪರಿಚಯ ಇವರಿಗೆ ತಿಳಿದಿತ್ತು ಎಂಬ ಅರಿವು ಬರುತ್ತದೆ. ರನ್ನ, ರಾಘವಾಂಕ, ಕುಮಾರವ್ಯಾಸ ಈ ಕವಿಗಳ ಕಾವ್ಯದಲ್ಲಿ ಅಪೂರ್ವ ನಾಟಕೀಯಾಂಶವನ್ನು ಕಾಣಬಹುದು.

ಭಾರತ ದೇಶಕ್ಕೆ ಬ್ರಿಟಿಷರು ಪ್ರವೇಶಿಸಿದ್ದರಿಂದ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಕನ್ನಡ ಭಾಷೆಯ ಮೇಲೆ ಹೆಚ್ಚಾಗಿ ಆಯಿತು. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡದಲ್ಲಿ ಹೊಸತನ ಮೂಡಿ ಭಾವಗೀತೆ, ಸಣ್ಣಕತೆ, ಕಾದಂಬರಿ, ನಾಟಕ, ವಿಮರ್ಶೆ ಮುಂತಾದ ಸಾಹಿತ್ಯಕ ಪ್ರಕಾರಗಳು ಬೆಳೆದವು. ಹಾಗೆ ನೋಡಿದರೆ ಕಾವ್ಯ, ಕತೆ, ಕಾದಂಬರಿಗಳು ಬೆಳೆದಷ್ಟು ನಾಟಕ ಬೆಳೆಯಲಿಲ್ಲ.

ಕನ್ನಡ ನಾಟಕಗಳನ್ನು ಸಾಮಾಜಿಕ, ಪೌರಾಣಿಕ ಹಾಗೂ ಐತಿಹಾಸಿಕ ಎಂದು ವಿಂಗಡಿಸಿಕೊಳ್ಳಲಾಗಿದೆ. ಐತಿಹಾಸಿಕ ನಾಟಕಗಳು, ಸಾಮಾಜಿಕ ನಾಟಕ ಮತ್ತು ಪೌರಾಣಿಕ ನಾಟಕಗಳಿಗಿಂತ ಕಡಿಮೆ ಪ್ರಮಾಣದಲ್ಲಿವೆ. ಸಾಮಾಜಿಕ ನಾಟಕಗಳು ಬದುಕಿನ ವಾಸ್ತವತೆಗೆ ಕನ್ನಡಿ ಹಿಡಿಯುತ್ತದೆ. ಪೌರಾಣಿಕ ನಾಟಕಗಳು ಧಾರ್ಮಿಕ ಪ್ರವೃತ್ತಿಯನ್ನು ಎತ್ತಿ ಹಿಡಿಯುತ್ತವೆ. ಐತಿಹಾಸಿಕ ನಾಟಕಗಳು ನಾಡಿನಲ್ಲಿ ಆಗಿಹೋದ ಘಟನೆಗಳನ್ನು ಒರೆಗಲ್ಲಿಗೆ ಉಜ್ಜುತ್ತಾ ಸತ್ಯವನ್ನು ತಿಳಿಸುತ್ತವೆ.

ನಾಟಕದಲ್ಲಿ 'ದೃಶ್ಯ' ಮತ್ತು 'ಶ್ರವ್ಯ' ಮಾಧ್ಯಮಗಳೆಂದು ಎರಡು ವಿಧ. ನಾಟಕ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ದೃಶ್ಯ ಮಾಧ್ಯಮದ ಕಂಪನಿ ನಾಟಕಗಳು, ಹವ್ಯಾಸಿ ನಾಟಕ ತಂಡಗಳನ್ನು ಕಾಣುತ್ತೇವೆ. ಇವರುಗಳು ಹಲವಾರು ಸಾಮಾಜಿಕ ನಾಟಕಗಳನ್ನು ಅಭಿನಯಿಸಿ ಪ್ರೇಕ್ಷಕರಿಂದ ಮೆಚ್ಚುಗೆ ಪಡೆಯುತ್ತಾರೆ. ಇವು ಜನ ಸಾಮಾನ್ಯರಲ್ಲಿ ಜಾಗೃತಿಯನ್ನು ಮೂಡಿಸಿವೆ.

ಹದಿನೇಳನೇ ಶತಮಾನದ ಸಿಂಗರಾರ್ಯನ 'ಮಿತ್ರಾವಿಂದ ಗೋವಿಂದ' ಮೊತ್ತಮೊದಲ ಪ್ರಯತ್ನವಾದರೂ ಅದು ಶ್ರೀ ಹರ್ಷನ ರತ್ನಾವಳಿಯ ಅನುವಾದ. ೧೮೮೭ರಲ್ಲಿ ಬೆಳಕು ಕಂಡ 'ಇಗ್ಗಪ್ಪ ಹೆಗ್ಗಡೆ ಪ್ರಹಸನ' ಮತ್ತು 'ಕನ್ಯಾವಿಕ್ರಯ' ಕನ್ನಡ ನಾಟಕ ಪರಂಪರೆಯಲ್ಲಿ ಆದ್ಯ ಸ್ಥಾನ ಪಡೆದುವು. ನಾಟಕಗಳ ರಚನೆ ಮತ್ತು ಪ್ರದರ್ಶನಗಳ ದೃಷ್ಟಿಯಿಂದ ನಂಜನಗೂಡು ತಿರುಮಲಾಂಬಾ ಮಹಿಳೆಯರಲ್ಲಿ ಮೊದಲ ಸ್ಥಾನ ಪಡೆದಿದ್ದಾರೆ. ನಾಟಕ ರಚನೆಯಲ್ಲಿ ತೀರಾ ಇತ್ತೀಚೆಗೆ ಸೇರ್ಪಡೆಗೊಂಡಿರುವ ಲೇಖಕಿಯರಲ್ಲಿ ಮಲ್ಲಿಕಾ ಘಂಟಿಯೂ ಒಬ್ಬರು.

ಮಲ್ಲಿಕಾ ಘಂಟಿಯವರು 'ಚಾಜ', 'ಒಂದು ಬಾವಿಯ ಸುತ್ತ', ಮತ್ತು 'ದಫನ್' ಎಂಬ ಮೂರು ನಾಟಕಗಳನ್ನು ಬರೆದಿದ್ದಾರೆ. ಇವೆಲ್ಲ ರಂಗ ಪ್ರದರ್ಶನಕ್ಕೆ ಯೋಗ್ಯವಾಗಿರುವ ನಾಟಕಗಳು. ೧೯೯೦ರಲ್ಲಿ ಪ್ರಕಟವಾದ 'ಚಾಜ' ನಾಟಕವು 'ಒಂದು ವಾಡೇದ ಕಥೆ' ಎಂಬ ಹೆಸರಿನಲ್ಲಿ ಎಚ್. ನಾಗರಾಜಪ್ಪನವರ ನಿರ್ದೇಶನದಲ್ಲಿ ರಂಗದ ಮೇಲೆ ಪ್ರಯೋಗಗೊಂಡು ಪ್ರೇಕ್ಷಕರ ಮೆಚ್ಚುಗೆ ಪಡೆದ ನಾಟಕವಾಗಿದೆ.

**ಚಾಜ**

ಬಂಡಾಯದ ಧೋರಣೆಯನ್ನು ಹೊಂದಿರುವ 'ಚಾಜ' ನಾಟಕವು ೯ ದೃಶ್ಯಗಳಲ್ಲಿ ರಚಿತವಾಗಿದೆ. ಹೆಣ್ಣಿನ ಶೋಷಣೆಯನ್ನು ಕುರಿತ ಈ ನಾಟಕವು ಊಳಿಗಮಾನ್ಯ ವ್ಯವಸ್ಥೆಯನ್ನು ಪ್ರಶ್ನಿಸುವ ಮೂಲಕ ಉತ್ತರ ಕರ್ನಾಟಕದಲ್ಲಿ ಜಾರಿಯಲ್ಲಿರುವ 'ಚಾಜ' ಪದ್ಧತಿಯನ್ನು ಕುರಿತು ಮಾತನಾಡುತ್ತದೆ. ಮಲ್ಲಿಕಾ ಘಂಟಿಯವರು ಈ ನಾಟಕವನ್ನು ತಮ್ಮದೇ ಆದ ಕಥಾ ನಿರೂಪಣೆಯ ಮೂಲಕ, ಸಂವಾದದ ನಿರ್ವಹಣೆಯ ಜೊತೆಗೆ ಸೃಷ್ಟಿಸಿದ್ದಾರೆ. ಈ ನಾಟಕದ ಮೂಲಕ ಸಾಮಾಜಿಕ ಸಂದೇಶವನ್ನು ನೀಡುವುದು ಮಲ್ಲಿಕಾ ಘಂಟಿಯವರ ಆಶಯವಾಗಿದೆ.

**ಅನಿಷ್ಟ ಪದ್ಧತಿ**

'ಚಾಜ' ನಾಟಕ ಉತ್ತರ ಕರ್ನಾಟಕದಲ್ಲಿರುವ ಒಂದು ಅನಿಷ್ಟ ಪದ್ಧತಿಯನ್ನು ಕೇಂದ್ರವಾಗಿಟ್ಟು ಬಂಡಾಯದ ಧೋರಣೆಯನ್ನು ಒಳಗೊಂಡು ಬರೆದ ನಾಟಕವಾಗಿದೆ. ಚಾಜ ಎಂದರೆ 'ನಿಯಮ' ಅಥವಾ 'ಪದ್ಧತಿ' ಎಂದು ಅರ್ಥ. ದೇವರ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಭೋಗಿಸುವ ರೂಢಿಬದ್ಧ ನಿಯಮ. ಹೀಗೆ ಹೆಣ್ಣನ್ನು ಭೋಗ ವಸ್ತುವನ್ನಾಗಿ ಕಾಣುವ ಜಮೀನ್ದಾರಿ ಪದ್ಧತಿಯ ವಿರುದ್ಧ ತಿರುಗಿ ಬೀಳುವ ಯುವಕ ರಾಮ್ಯಾ. ಈತ ಮುಂದೆ ರಮೇಶನಾಗುತ್ತಾನೆ. ನಮ್ಮ ಜನರು ನಮ್ಮನ್ನು ಕಾಪಾಡುತ್ತಾರೆ ಎಂಬ ಭ್ರಮೆಯಲ್ಲಿ ಅಲ್ಲಿನ ಜನರು ಇರುತ್ತಾರೆ. ಆದರೆ ಅದಕ್ಕೆ ವಿರುದ್ಧವಾಗಿ ಆತ ನಡೆದುಕೊಳ್ಳುವ ಸಂದರ್ಭ. ಇವುಗಳನ್ನು ಕುರಿತಂತೆ ಈ ನಾಟಕ ಎಚ್ಚರಿಸಿ ಹೆಣ್ಣಿನ ಭರವಸೆಯ ಭ್ರಮನಿರಸನವನ್ನು ಎತ್ತಿಹಿಡಿಯುತ್ತದೆ. ಆದರೂ "ನಾವೆಲ್ಲ ನಮ್ಮ ವಸ್ತುವನ್ನು ಎಲ್ಲಿ ಕಳೆದುಕೊಂಡಿರುತ್ತೇವೋ ಅಲ್ಲಿಯೇ ಅದನ್ನು ಹುಡುಕಿ ತೆಗೆಯಬೇಕು" ಎಂಬ ನಿಲುವಿಗೆ ಬರುತ್ತಾರೆ. ಇದಕ್ಕೆ ತಕ್ಕಂತೆ ದಲಿತ ಸಮೂಹದಿಂದ 'ಬಸಣ್ಣ' ಉದಯಿಸುತ್ತಾನೆ. ಈ ಬಸಣ್ಣನಿಂದ ಹೊರಡುವ ಮಾತುಗಳೆಲ್ಲವೂ 'ನವ ಬ್ರಾಹ್ಮಣರಾದ' ದಲಿತರನ್ನು ಎಚ್ಚರಿಸುದಂತಿವೆ. "ನಾವು ಸೇಡು ತೀರಿಸಿಕೊಳ್ಳಬೇಕಾಗಿದ್ದು ಮೂಲ ಜಾತಿಯವರ ಮ್ಯಾಲ ಅಲ್ಲS ನಮ್ಮ ಬಡತನದ ವಿರುದ್ಧ, ನಮ್ಮ ಪ್ರಜ್ಞೆಯ ವಿರುದ್ಧ, ನಮ್ಮ ಹಸಿವಿನ ವಿರುದ್ಧ, ಆದರ್ಶ ಹಿಂದಿನ ವ್ಯವಸ್ಥೆ ಮಾಡಿಟ್ಟ ಕಂದಾಚಾರಗಳನ್ನೆಲ್ಲಾ ನಿಲ್ಲಸಿಬೇಕೇ ಹೊರತು ಅದಕ್ಕೆ ಹೊಸ ಕೊಟ್ ಸೇಡಿ ತೀರಿಸಿಕೊಳಲು ಹಾದಾರ ಮಾಡಕ ಹೋಗಬ್ಯಾಡ. ನೀ ಮಾಡಿದ್ಯಾ ಆದರೆ ದೇಸಾಯಿರೆಂತ ಮೊದಲ ನಿನ್ನ ವಿರುದ್ಧ ದನಿ ಎತ್ತ ಬೇಕಾಗುತ್ತೆ"[೧೦] ಎನ್ನುವಲ್ಲಿ ದಲಿತನೊಬ್ಬ ಕೈಗೊಳ್ಳಬೇಕಾದ ಕ್ರಮಗಳನ್ನು ಸೂಚಿಸುತ್ತದೆ. ಸಮಾಜವನ್ನು ಅರ್ಥೈಸಿಕೊಳ್ಳುವ ಬಗೆಯನ್ನು ಇದು ವಿವರಿಸುತ್ತದೆ. ಇಲ್ಲಿ ಬಸಣ್ಣ ಆವೇಶಯುತ ಯುವಕನಾಗುವುದಕ್ಕಿಂತಲೂ, ವಾಸ್ತವವಾದಿಯಾಗುತ್ತಾನೆ. "ಈ

ನಾಟಕದ ಮತ್ತೊಂದು ವಿಶೇಷತೆಯೆಂದರೆ ಸ್ತ್ರೀಪಾತ್ರಗಳು ಎಲ್ಲಿಯೂ ಪರಸ್ಪರ ಸಂಘರ್ಷಕ್ಕಿಳಿಯುವುದಿಲ್ಲ, ಶೋಷಣೆ ಮಾಡುವುದಿಲ್ಲ. ಮೌನವಾಗಿಯಾದರೂ ಸಹಕರಿಸುತ್ತವೆ. ಹೀಗಾಗಿ 'ಹೆಣ್ಣಿಗೆ ಹೆಣ್ಣು ಶತ್ರು' ಎನ್ನುವ ಮಾತನ್ನು ಸೈದ್ಧಾಂತಿಕ ತಿಳುವಳಿಕೆಯುಳ್ಳ ಘಂಟಿಯವರು ಒಪ್ಪುವುದಿಲ್ಲ".[೧೧]

ಇಂದಿನ ಸಮಾಜ ಜಮೀನ್ದಾರಿ ವ್ಯವಸ್ಥೆಯಿಂದ ಅಧಿಕಾರಶಾಹಿ, ಬಂಡವಾಳಶಾಹಿ ಕಡೆಗೆ ಸಾಗುತ್ತಿರುವ ಪರಿಯನ್ನೂ, ಸಂಕ್ರಮಣ ಕಾಲಘಟ್ಟದ ಸಂಘರ್ಷವನ್ನೂ ಎತ್ತಿ ತೋರಿಸುವುದು, ಆ ಮೂಲಕ ಹಿಂದಿನ ಕಾಲಘಟ್ಟದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಬದುಕಿನ ಪರಿಣಾಮಗಳನ್ನು ತೆರೆದಿಡುವುದು ಈ ನಾಟಕದ ಪ್ರಮುಖ ಆಶಯವಾಗಿದೆ.

'ಚಾಜ'ದ ಹೆಸರಿನಲ್ಲಿ ಊರ ಹೆಂಗಸರಿಗೆಲ್ಲಾ ದೊರೆಯಾಗಿ ಮೆರೆಯುವ ದೇಸಾಯಿ ವರ್ತನೆಯನ್ನು ಪ್ರಾರಂಭದಿಂದಲೇ ವಿರೋಧಿಸುವ ಸಾವಂತ್ರಿ ಸ್ತ್ರೀ ಸಮಾಜದ ಒಂದು ಧ್ವನಿಯಾಗಿದ್ದಾಳೆ. ದೇಸಾಯಿಯ ದೌರ್ಜನ್ಯ ಎಂತಹದ್ದೆಂದರೆ ಸಾವಂತ್ರಿ ದೇಸಾಯಿಯ ಈ ಕೆಟ್ಟ ವರ್ತನೆಯನ್ನು ಹೀಗೆ ಹೇಳುತ್ತಾಳೆ:

"ಈ ವಾಡೇದಾಗ ಹಾಡಹಗಲ ನಡೆಯುವ ಹಾದರ. ಅತ್ಯಾಚಾರ ನೋಡಿದ್ರ ನಿನಗೆ ಏನೂ ಅನುಸುದಿಲ್ಲನು. ಮಾಡಿಕೊಂಡ ಹೆಂಡತಿಯರಿಗೆ ಸುಖಾ ಕೊಡದೆ ಮರಾ ಮರಾ ಮರಗಸ್ತಾ ಊರಿನ ತಿಳಿಗೇಡಿ ಮಂದಿ ಹೆಣ್ಣಮಕ್ಕಳ ಜೋಡಿ ಚಾಜದ ಹೆಸರಿನ್ಯಾಗ ಮಜಾ ಮಾಡಕೊಂಡ ಹೊಕ್ಕನಲ್ಲಾ? ಇದೇ ಏನs, ಇವನ ಗಂಡಸ್ಥನ; ಬಡತನ ಅಜ್ಞಾನದಿಂದ ಊರಮಂದಿ ಅಂಜಿ ಹಿಂಗ ಮಾಡತಾವು. ನೀನು ಇದನ್ನ ನೋಡಿಕೊಂಡ ಸುಮ್ಮಕ ಅದೀಯಲ್ಲ. ನನಗೇನು ಇದು ಸರಿ ಕಾಣುದಿಲ್ಲ"[೧೨] ಎಂದು ರುದ್ರಮ್ಮನಿಗೆ ಹೇಳುವಾಗ ವ್ಯವಸ್ಥೆಯನ್ನು ವಿರೋಧಿಸುವ ಛಾತಿಯನ್ನು ಸ್ವತಃ ದೇಸಾಯಿಯೆ ಕಿರಿಯ ಹೆಂಡತಿಯಾದ ಸಾವಂತ್ರಿಯಲ್ಲಿ ಕಾಣಬಹುದು.

ಹೆಣ್ಣಿನ ಮೇಲೆ ನಡೆಯುವ ಶೋಷಣೆಯನ್ನು, ಜಡ್ಡುಗಟ್ಟಿದ ವ್ಯವಸ್ಥೆಯನ್ನು ಬದಲಿಸುವ ಉದ್ದೇಶದಿಂದ ಮಂಡಲ ಪಂಚಾಯ್ತಿ, ಜಿಲ್ಲಾ ಪರಿಷತ್ತುಗಳ ಸಹಾಯದಿಂದ ಅಧಿಕಾರಕ್ಕೆ ಬರುವ ದಲಿತ ಯುವಕ ರಾಮ್ಯಾ. ಈತನನ್ನು ಕುರಿತು ಕುಲಕರ್ಣಿ, "ಭೂಮಿ ಮ್ಯಾಲೆ ವರ್ಣಸಂಕರ ನಡದೈತೀ. ಇದು ಬಾಳ ದಿವಸ ನಡೆಯುವ ವಿಚಾರವಲ್ಲ. ಮೀಸಲಾತಿ ನೀಡಿ ಬುದ್ಧಿಗೇಡಿಗಳನ್ನು ವಿಧಾನಸೌಧದೊಳಗ ಕುಂದ್ರಿಸಿದ್ರ ಅವರ ಏನ ಮಾಡಲಾರ. ನಿದ್ದಿ ಮಾಡತಾರ, ತಲಿಯಾಗ ಲದ್ದಿ ಇಟಗೊಂಡ. ಈ ಧರಣಿ ಮ್ಯಾಲ ಪುರಾತನರು ಏನಏನ ನಿಯಮಗಳನ್ನು ಮಾಡಿ ಹೋಗ್ಯಾರ ಹಾಗ ನಡದು ದೇವಾನು

ದೇವತೆಗಳು ಸಂತೃಪ್ತಿಯಿಂದ ಇರತಾರ".[೧೩] ಎನ್ನುವಲ್ಲಿ ಮೇಲ್ವರ್ಗದ ಮೀಸಲಾತಿ ವಿರೋಧಿ ಧೋರಣೆಯನ್ನು ಕಾಣಬಹುದು.

ಈ ಮೀಸಲಾತಿಯ ಸಹಾಯದಿಂದಲೇ ಅಧಿಕಾರಕ್ಕೆ ಬಂದ ರಾಮ್ಯಾ 'ಚಾಜ'ವನ್ನು ಮುರಿದು ಹಾಕುತ್ತಾನೆ ಎಂದು ಆ ವಾಡೇದ ಜನತೆ ಭಾವಿಸಿದ್ದರು. ಆದರೆ ಆತ ಹೆಣ್ಣಿನ ಶೋಷಣೆಯನ್ನು ಮಾಡುವ ಮತ್ತೊಬ್ಬ ದೇಸಾಯಿಯಾಗುತ್ತಾನೆ. ಮುಂದೆ "ಈ ಚಾಜದ ಹೆಸರಿನ್ಯಾಗ ಬೋಗಿಸೋ ಸಂಪ್ರದಾಯಕ್ಕೆ ಇನ್ನು ಮುಂದೆ ಅವಕಾಶ ಕೊಡುದಿಲ್ಲ. ಮೇಣೆ ಹೊರು ಪದ್ಧತಿ ನಿಲ್ಲಬೇಕು ಅನ್ನೋ ನಮ್ಮ ವಾದದಾಗ ಯಾವ ರಾಜಿ ಮಾತಯಿಲ್ಲ".

ದೇಸಾಯಿನ್ನ ಬಿಡಿಸಿ ಅದ್ರಾಗ
ರಮೇಶಪ್ಪ ಕುಂದ್ರಸಾಕ ಅಲ್ಲ
ನಾವು ಮನಿಮರಾ ಬಿಟ್ಟು ಹೋರಾಡಾಕ ಹತ್ತಿದ್ದು.
ಮೇಣೆದಾಗ ದೇಸಾಯಿ ಕುಂತ್ರೇನು ರಮೇಶ ಕುಂತ್ರೇನು
ಅದನ್ನ ಹೊರುವವರು ಯಾರು
ನಮ್ಮ ಮಂದಿನಾ ಅಲ್ಲೇನ
ಇದಕ್ಕಾ ನಾವು ಯಾರು ಒಪ್ಪುದಿಲ್ಲ"[೧೪]

ಎಂದು ಬಸವಣ್ಣ ಚಾಜದ ಹೆಸರಿನಲ್ಲಿ ನಡೆಯುವ ಶೋಷಣೆಯ ವಿರುದ್ಧ ಬಂಡಾಯದ ಧ್ವನಿಯನ್ನು ಎತ್ತುತ್ತಾನೆ.

ನಮ್ಮ ವಿಚಾರದಾವ ಶಾಸಕನಾದ್ರ
ನಮ್ಮ ಜನಾಂಗಾನಾ ಸುಧಾರಿಸಬಹುದು ಅಂತ.
ಸಾವಿರಾರು ವರ್ಷಗಳಿಂದ
ಕತ್ತಲವಾಗ ಕೂಳಿತಿದ್ದ
ನಮ್ಮ ಜನರಿಗೆ ರಮೇಶನಂತಾವರು
ಬಂದ ಮಿಣುಕ ದೀಪರ ಆಗಲಿ
ಅಂತ ಕನಸ ಕಾಣಾಕ ಹತ್ತೀವಿ

ಎಂಬ ಬಸವಣ್ಣನ ಮಾತುಗಳಲ್ಲಿ ಶೋಷಣೆಯ ವಿರುದ್ಧ ಪ್ರತಿಭಟಿಸಬೇಕಾಗಿದ್ದ ವ್ಯಕ್ತಿಯೂ ಶೋಷಣೆ ಮಾಡಲು ತೊಡಗಿದಾಗ ಆತನ ವಿರುದ್ಧ ಬಂಡಾಯ ವೇಳುವ ಬಸವಣ್ಣನ ಪಾತ್ರವನ್ನು ನೋಡಬಹುದು.

ಪ್ರಜಾಪ್ರಭುತ್ವದಲ್ಲಿ ಸಮಾನತೆಯಿದೆ ಎಂಬುದನ್ನು ಈ ನಾಟಕದಲ್ಲಿ ಸಾವಂತ್ರಿ ಸಾರುತ್ತಾಳೆ. ಈಕೆ ಗಾಂಧಿ, ಅಂಬೇಡ್ಕರ್ ಹೆಸರಿನಲ್ಲಿ ಹೇಗೆ ರಾಜಕೀಯ ಮಾಡುತ್ತಾರೆ ಹೇಗೆ ಜನರನ್ನ ಮೋಸ ಮಾಡುತ್ತಾರೆ ಎಂಬುದನ್ನು ತಿಳಿಸುತ್ತಾಳೆ. ಈಕೆ ವಾಡೇದ ಜನರಿಗೆ ಅರಿವನ್ನು ಮೂಡಿಸುತ್ತಾಳೆ. ಯಾವ ಧರ್ಮ, ಸಂಸ್ಕೃತಿ ಮನುಷ್ಯ ಮನುಷ್ಯರನ್ನು ಒಂದಾಗಿಸಿಬೇಕಿತ್ತೋ ಅದೇ ಧರ್ಮ, ಸಂಸ್ಕೃತಿ ಮನುಷ್ಯ ಮನುಷ್ಯರನ್ನ ದೂರ ಮಾಡುತ್ತವೆ ಎಂಬುದನ್ನ ನಾಟಕಕಾರರು ಈ ನಾಟಕದ ಮೂಲಕ ತಿಳಿಸುತ್ತಾರೆ. ಈ ದೇಶದ, ಈ ನೆಲದ ಕಾನೂನುಗಳು, ಸಂವಿಧಾನಕ್ಕಿಂತಲೂ ಉದ್ದ ಇದ್ದಾವೆ ಎಂಬುದನ್ನು ಹೇಳುತ್ತಾರೆ.

'ಚಾಜ' ನಾಟಕವನ್ನು ಕುರಿತು ವೀರಣ್ಣ ರಾಜೂರ ಅವರು ಮುನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ. "ಜಮೀನ್ದಾರಿ ವ್ಯವಸ್ಥೆಯ ನೇತಾರರಾದ ದೇಸಾಯಿ ಕುಲಕರ್ಣಿಯವರು ದಲಿತರ-ದುಡಿಯುವವರ ಮೇಲೆ ನಡೆಸುತ್ತ ಬಂದ ದೌರ್ಜನ್ಯ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡು ಹೆಣ್ಣಿನ ಮೇಲೆ ನಡೆಸುತ್ತಾ ಬಂದ ಶೋಷಣೆ ನಿರಂತರವಾಗಿ ನಡೆದು ಬಂದ ಈ ಜಡ್ಡುಗಟ್ಟಿದ ವ್ಯವಸ್ಥೆಗಳನ್ನು ಒಡೆದು ಹಾಕಲು ದಲಿತ ಯುವಕನೊಬ್ಬ ಹೊಸ ಸಮಾಜ ರಚನೆಯ ಪ್ರತೀಕಗಳಾದ ಮಂಡಲ ಪಂಚಾಯ್ತಿ, ಜಿಲ್ಲಾ ಪರಿಷತ್ತು, ಮೀಸಲಾತಿ ಮೊದಲಾದ ಸಹಾಯಗಳನ್ನು ಉಪಯೋಗಿಸಿಕೊಂಡು ಅಧಿಕಾರ ಸೂತ್ರವನ್ನು ಕೈಯಲ್ಲಿ ತೆಗೆದುಕೊಂಡು ಪಟ್ಟ ಭದ್ರರು ನಡೆಸುತ್ತಾ ಬಂದ ನೀತಿ ನಿಯಮ(ಚಾಜ)ಗಳನ್ನು ಮುರಿದು ಹಾಕುತ್ತಾನೆ. ಆದರೆ ಅಧಿಕಾರದಿಂದ ಮೇಲೇರಿದ ಮೇಲೆ ಅದೇ ದಲಿತ ನಾಯಕ ಮತ್ತೊಬ್ಬ ದೇಸಾಯಿಯಾಗಿ ತಮ್ಮವರನ್ನೇ ಶೋಷಿಸ ತೊಡಗಿದ್ದು ಒಂದು ದೊಡ್ಡ ದುರಂತ. ಕೊನೆಗೆ ಇದನ್ನು ಪ್ರತಿಭಟಿಸಿ ಮತ್ತೆ ಹೊಸ ಸಮಾಜ ನಿರ್ಮಿಸಲು ಮತ್ತೊಂದು ಶಕ್ತಿ ಅದೇ ದಲಿತ ಸಮಾಜದಲ್ಲಿ ಹುಟ್ಟಿಕೊಳ್ಳುತ್ತದೆ ಎಂದು ಹೇಳುವಲ್ಲಿ ನೆಲಕಚ್ಚಿದ್ದ ಜನರಲ್ಲಿ ಇಂದು ಜಾಗೃತಿ ಮೂಡಿದೆ ಎಂಬುದನ್ನು ಸಂಕೇತಿಸಲಾಗಿದೆ".[೧೫] ಹಾಗೆಯೇ ದೇಸಾಯಿಯ ಕಿರಿಯ ಹೆಂಡತಿ ಸಾವಂತ್ರಿ ಅವನ ದಬ್ಬಾಳಿಕೆಯನ್ನು ಪ್ರತಿಭಟಿಸಿ ನಿಂತದ್ದು ಇಡೀ ಸ್ತ್ರೀ ಸಮಾಜದ ವಿಮೋಚನೆಯ ಪ್ರತೀಕವಾಗಿದೆ.

ಸಿದ್ಧನಗೌಡ ಪಾಟೀಲ ಅವರು ಹೀಗೆ ಅಭಿಪ್ರಾಯಪಡುತ್ತಾರೆ; "ವಿಜಾಪುರ ಜಿಲ್ಲೆಯ ತುಂಬ ಹಾಗೂ ಉತ್ತರ ಕರ್ನಾಟಕದ ಹೆಚ್ಚಿನ ಹಳ್ಳಿಗಳಲ್ಲಿ 'ಚಾಜ' ಎಂಬ ಪದ ಬಳಕೆಯಲ್ಲಿದೆ. ಜಮೀನ್ದಾರಿ ವ್ಯವಸ್ಥೆಯಲ್ಲಿ ಮದುವೆ ನಂತರ ಮನೆಗೆ ಬರಬೇಕಾದ ಸೊಸೆ ಊರ ಗೌಡ ಅಥವಾ ದೇಸಾಯಿ ಮನೆಯಲ್ಲಿ ಅವನ ತೆಕ್ಕೆಯಲ್ಲಿ ಮೊದಲ ರಾತ್ರಿ ಕಳೆಯಬೇಕಾಗಿತ್ತು. ಅದೂ ಒಂದು 'ಚಾಜ' ಹಬ್ಬ ಹರಿದಿನದ ಎಲ್ಲಾ ಕ್ರಿಯೆಗಳು ಗೌಡ, ದೇಸಾಯಿಗಳ

ಮನೆಯಿಂದಲೇ ಅವರ ನಾಯಕತ್ವದಲ್ಲಿ ಆರಂಭಗೊಳ್ಳುತ್ತವೆ. ಇದೆಲ್ಲ 'ಚಾಜ' ಬಹುರೂಪಗಳೇ ಆಗಿವೆ".[೧೬]

ಇದು ಸಾಮಂತಶಾಹಿ, ಪುರೋಹಿತ ಶಾಹಿಗಳು ನಿರ್ಮಿಸಿದ ಸಂಸ್ಕೃತಿ. 'ಚಾಜ' ಪದ ಕೆಲವೇ ಕಡೆ ಬಳಕೆಯಲ್ಲಿದ್ದರೂ ಅದರ ಅರ್ಥದ ಕ್ರಿಯೆ ದೇಶದ ತುಂಬ ಇದೆ ಅದನ್ನು ಈ ನಾಟಕ ತೋರಿಸುತ್ತದೆ. ಅಸ್ತಮಾನದ ಸಾಮಂತಶಾಹಿ, ವರ್ತಮಾನದ ಬಂಡವಾಳಶಾಹಿ ಹಿತಾಸಕ್ತಿಗಳು, ರಾಜಕೀಯ, ಧಾರ್ಮಿಕ ಅಧಿಕಾರಕ್ಕಾಗಿ 'ಚಾಜ'ದ ಹೆಸರಿನಲ್ಲಿ ನಡೆಸಿದ ತಿಕ್ಕಾಟ ಈ ನಾಟಕದಲ್ಲಿದೆ.

"ದಲಿತರು ಸೇಡು ತೀರಿಸಿಕೊಳ್ಳಬೇಕಾಗಿದ್ದು ಮೇಲ್ಜಾತಿ ಜನರ ಮೇಲಲ್ಲ, ಜಾತಿ ವ್ಯವಸ್ಥೆಯ ವಿರುದ್ಧ; 'ಚಾಜ'ದ ಹೆಸರಿನಲ್ಲಿ ನಡೆವ ದಬ್ಬಾಳಿಕೆ ವಿರುದ್ಧ"[೧೭] ಎಂದು ಹೇಳುವ ಈ ನಾಟಕ ಮೇಲ್ಜಾತಿ ಬಡವರೂ, ದಲಿತರೂ, ಪುರುಷ ವ್ಯವಸ್ಥೆಯಲ್ಲಿ ನರಳುತ್ತಿರುವ ಎಲ್ಲಾ ಜಾತಿಯ ಮಹಿಳೆಯರೂ ಈ ವರ್ಗ ಪ್ರಧಾನ ವ್ಯವಸ್ಥೆಯ ವಿರುದ್ಧ ಸಂಘಟಿತ ಹೋರಾಟಕ್ಕಿಳಿಯಬೇಕೆಂಬ ಭವಿಷ್ಯತ್ತಿನ ಕರೆ, ಆಶಯವನ್ನು ಹೊಂದಿ ಈ ನಾಟಕ ಮುಕ್ತಾಯಗೊಳ್ಳುತ್ತದೆ.

ಮೇಲಿನ ಸಿದ್ಧಾಂತಕ್ಕೆ ಪೂರಕವಾಗಿ ಈ ನಾಟಕ ಕಲಾತ್ಮಕವಾಗಿ ಮೂಡಿ ಬಂದು ನಾಟಕದ ಆಶಯವನ್ನು ಪೂರೈಸಿದೆ. ಹವ್ಯಾಸಿ ರಂಗಭೂಮಿ, ವೃತ್ತಿ ರಂಗಭೂಮಿ ಎಂದು ವಿಂಗಡಿಸಲ್ಪಟ್ಟಿರುವ ಈ ದಿನಗಳಲ್ಲಿ ಎರಡೂ ರೀತಿಯ ಪ್ರೇಕ್ಷಕರನ್ನು ಕಲಾ ಮಾಧ್ಯಮದ ಮೂಲಕ ಚಿಂತನೆಗೆ ಹಚ್ಚುವ ಕೆಲಸವನ್ನು 'ಚಾಜ' ಮಾಡುತ್ತದೆ. ಇದು ಇಂದಿನ ಸಾಂಸ್ಕೃತಿಕ ಚಳವಳಿಯಲ್ಲಿ ತೀರ ಅವಶ್ಯಕ ನಾಟಕ ಬರೆದ ಮಲ್ಲಿಕಾ ಘಂಟಿ ಅಭಿನಂದನಾರ್ಹರು.

**ಒಂದು ಬಾವಿಯ ಸುತ್ತ**



ಮಲ್ಲಿಕಾ ಘಂಟಿಯವರ ಎರಡನೆಯ ನಾಟಕ 'ಒಂದು ಬಾವಿಯ ಸುತ್ತ' ಇದೂ ಒಂದು ಸರಳ ಸಾಮಾಜಿಕ ನಾಟಕವಾಗಿದೆ. ಸ್ವಾತಂತ್ರ್ಯ ಬಂದು ಇಷ್ಟು ವರ್ಷ ಆದರೂ ಇನ್ನೂ ನಮ್ಮ ಗ್ರಾಮ ಭಾರತ ಯಾವುದೇ ರೀತಿಯಿಂದ ಸುಧಾರಣೆಗೊಂಡಿಲ್ಲ. ಅಸ್ಪೃಶ್ಯತೆ ಎನ್ನುವಂತದ್ದು ಇದೆಯೆಲ್ಲ ಅದು ಹೋಗಬೇಕು ಎನ್ನುವಂತದ್ದು ಆದರ್ಶ. ಆದರೆ ವಾಸ್ತವ ಅಲ್ಲ. ವಾಸ್ತವದೊಳಗೆ ಅದು ಗ್ರಾಮ ಭಾರತದೊಳಗೆ ಜಮೀನ್ದಾರಿಕೆಯ ನೆಲೆಗಟ್ಟಿನೊಳಗೆ ಇದು ಎಷ್ಟು ಪ್ರಬಲವಾಗಿದೆಯೆಂದರೆ ಯಾವುದೇ ಕಾನೂನಿನ ಮೂಲಕ ಅದನ್ನು ತೆಗೆದು ಹಾಕಲಿಕ್ಕೆ ಅಥವಾ ಕಿತ್ತು ಹಾಕಲಿಕ್ಕೆ ಸಾಧ್ಯವಾಗದ ಹಾಗೆ ಎಲ್ಲ ವರ್ಗಗಳ ಜನರ ಮನಸ್ಸಿನಲ್ಲೂ ಅದು ಸ್ಥಾಯಿಯಾಗಿ ಕುಳಿತಿದೆ.

ಅಂತಹ ಉಪಾಯದೊಳಗೆ ಒಂದು ಬಾವಿ. ಇಡೀ ಊರಿನ ಜನತೆ ನೀರು ಕುಡಿಯುಲಿಕ್ಕೆ ಒಂದು ಬಾವಿ. ಆ ಬಾವಿಗೆ ನಾಲ್ಕು ಕಡೆ ನೀರು ಸೇದಲಿಕ್ಕೆ ವ್ಯವಸ್ಥೆಯಿರುತ್ತದೆ. ಎಲ್ಲ ಜಾತಿಯವರು ನೀರು ಸೇದಲಿಕ್ಕೆ ಅವಕಾಶವಿದೆ. ಆದರೆ ದಲಿತರಿಗೆ ಮಾತ್ರ ನೀರು ಸೇದಲಿಕ್ಕೆ ಅವಕಾಶವಿಲ್ಲ. ದಲಿತರು ಮಾತ್ರ ಬಾವಿ ದಂಡೆಯ ಮೇಲೆ ಕುಳಿತುಕೊಳ್ಳಬೇಕು. ಎಲ್ಲಾ ಜಾತಿಯವರು ಯಾರಾದರೂ ಕರುಣೆತೋರಿ ನೀರು ಹಾಕಿಕೊಟ್ಟರೆ ಮಾತ್ರ ಅವರಿಗೆ ನೀರು ಇಲ್ಲದಿದ್ದರೆ ಅವರಿಗೆ ನೀರೆಯಿಲ್ಲ.

ಅಂತಹದ್ದೇ ಊರೊಳಗೆ ಒಬ್ಬ ಗಾಂಧಿವಾದಿ ಇರ್ತಾನೆ. ಆತ ಮಾಸ್ತರು. ಆ ಮಾಸ್ತರ (ಶಿಕ್ಷಕರ) ಮೂಲಕ ಪರಿವರ್ತನೆ ಮಾಡಲಿಕ್ಕೆ ಬಯಸುತ್ತಾರೆ. ಇದನ್ನು ವಸ್ತುವನ್ನಾಗಿ ಇಟ್ಟುಕೊಂಡು ರಚಿತವಾದದ್ದು ಈ ನಾಟಕ. ಜಾತಿ ವ್ಯವಸ್ಥೆ ನಮ್ಮನ್ನು ಇವತ್ತಿಗೂ, ನಮ್ಮ ಮನುಷ್ಯ ಜನತೆಯನ್ನು ಸ್ವಾಭಿಮಾನವನ್ನು ಹೇಗೆ ಇಟ್ಟುಕೊಳ್ಳುತ್ತದೆ ಎಂಬುದನ್ನು ತಿಳಿಸುತ್ತದೆ.

ಭೂಮಿಯ ಒಡೆತನ ಅಂದಕೂಡಲೇ ಮೇಲ್ಜಾತಿಯವರು ಎಂತಹ ಭೂಮಿಯನ್ನ ಬೆಳೆ ತೆಗೆಯಲು ಕೊಡುತ್ತಾರೆ. ಬಂಜರು ಭುಮಿಯನ್ನ ಕೊಡುತ್ತಾರೆ. ಭೂಮಿಯನ್ನ ಕೊಟ್ಟರೆ ಎಂತಹ ಭೂಮಿಯನ್ನ ಕೊಡಬೇಕಾಗಿತ್ತು? ಬೆಳೆ ಬೆಳೆಯಲು ಯೋಗ್ಯವಾದಂತಹ ಭೂಮಿಯನ್ನು ಕೊಡಬೇಕಿತ್ತು. ಆದರೆ ಬುದ್ಧಿವಂತಿಕೆಯಿಂದ ಒಳ್ಳೆಯ ಜಮೀನುಗಳನ್ನು ತಮ್ಮ ಹೆಸರಿನಲ್ಲಿ ಇಟ್ಟುಕೊಂಡು ಈ ತರಹದ ಬಂಜರು ಭೂಮಿಯನ್ನು ದಲಿತರಿಗೆ ಕೊಡುವ ಮೂಲಕ ಭೂಮಿ ಕೊಟ್ಟಿದೆ ಅನ್ನಿಸಿಕೊಂಡರು. ಆದರೆ ಆ ಭೂಮಿ ಉಪಯೋಗಕ್ಕೆ ಬರಲಿಲ್ಲ. ಇಂತಹ ಒಂದು ವ್ಯವಸ್ಥೆಯನ್ನು ಕುರಿತು ಮಲ್ಲಿಕಾ ಘಂಟಿಯವರು 'ಒಂದು ಬಾವಿಯ ಸುತ್ತ' ನಾಟಕ ರಚನೆ ಮಾಡಿದ್ದಾರೆ.

**ದಫನ್**

ಮಲ್ಲಿಕಾ ಘಂಟಿಯವರು ರಚಿಸಿರುವ ಮೂರನೆ ನಾಟಕ 'ದಫನ್' ನಾಟಕ. ಈ ನಾಟಕ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕುರಿತು ಬರೆದದ್ದಾಗಿದೆ. ಒಬ್ಬ ರಾಜ, ರಾಜನ ರಾಜ್ಯದೊಳಗೆ ಒಬ್ಬ ಸಂಗೀತಗಾರ ಇರುತ್ತಾನೆ. ಆ ಸಂಗೀತಗಾರನ ಹಾಡುವಿಕೆಯಿಂದ ರಾಜನಿಗೆ ತೊಂದರೆ ಆಗುತ್ತಿರುತ್ತದೆ. ಅದಕ್ಕೆ ರಾಜ ಸಂಗೀತಗಾರನನ್ನ ರಾಜ್ಯ ಬಿಟ್ಟು ಹೊರಗೆ ಹಾಕುತ್ತಾನೆ. ಅವನು ಹೋದಲ್ಲಿ ಮತ್ತೇ ಹಾಡುತ್ತಾನೆ. ಅಲ್ಲಿ ಮತ್ತೇ ಜನ ಸೇರುತ್ತಾರೆ. ಆಗ ರಾಜ ಆ ಸಂಗೀತಗಾರನ ಕೈಯನ್ನು ಕತ್ತರಿಸುತ್ತಾನೆ. ಒಂದು ಕಾಲು ಕತ್ತರಿಸುತ್ತಾನೆ. ಕಣ್ಣು ತೆಗೆಯುತ್ತಾನೆ. ಇಡೀ ಅವನ ದೇಹದ ಅಂಗಾಂಗಗಳನ್ನ ಕತ್ತರಿಸಿದರೂ ಅವನು ಹಾಡುತ್ತಲೇ ಇರುತ್ತಾನೆ. ಜನ ಕೇಳುತ್ತಲೇ ಇರುತ್ತಾರೆ.

ಈ ನಾಟಕದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಆಂಶಿಕವಾಗಿ ಹರಣ ಮಾಡಬಹುದು. ಕಾನೂನುಗಳ ಮೂಲಕ, ಕಾಯ್ದೆಗಳ ಮೂಲಕ ಆಂಶಿಕವಾಗಿ ಹರಣ ಮಾಡಬಹುದು. ಆದರೆ ಆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೂಲದಲ್ಲಿಯೇ ಕಿತ್ತು ಹಾಕಲಿಕ್ಕೆ ಸಾಧ್ಯವಾಗುವುದಿಲ್ಲ. ಸಾಯಿಸಲಿಕ್ಕೆ ಸಾಧ್ಯವಿಲ್ಲ ಎಂಬ ವಸ್ತುವನ್ನು, ಆಶಯವನ್ನು ಇಟ್ಟುಕೊಂಡು ರಚಿತವಾದ ನಾಟಕ ಇದಾಗಿದೆ.

ಒಟ್ಟಾರೆ ಅಭಿವ್ಯಕ್ತಿ ಸ್ವಾತಂತ್ರ್ಯ ಎನ್ನುವಂತಹದ್ದು ಮನುಷ್ಯನಿಗೆ ಬಹಳ ಮುಖ್ಯ ಎಂಬುದನ್ನು ಈ ನಾಟಕ ಧ್ವನಿಸುತ್ತದೆ. ಆಭಿವ್ಯಕ್ತಿ ಸ್ವಾತಂತ್ರ್ಯವನ್ನು ಯಾವ ರಾಜ್ಯ ಆಗಲಿ, ಯಾವುದೇ ಕಾನೂನಾಗಲಿ ಕಿತ್ತುಕೊಳ್ಳಲಿಕ್ಕೆ ಆಗುವುದಿಲ್ಲ. ಆತ ಎಲ್ಲಿ ಸತ್ತಿರುತ್ತಾನೆ ಅಲ್ಲಿ ಆತ ಮರವಾಗಿ ಹುಟ್ಟುತ್ತಾನೆ. ಆ ಮರದಲ್ಲಿ ಗಾಳಿ ಬಿಟ್ಟಾಗ ಸಂಗೀತ ಕೇಳುತ್ತದೆ. ಆ ಮರದಲ್ಲಿ ಎಲೆ ಬಿಡುತ್ತದೆ; ಬಿಟ್ಟ ಎಲೆಯಲ್ಲಿ ಸಂಗೀತ ಬರುತ್ತದೆ. ಆ ಮರದ ಇಂಪಿನಲ್ಲಿ ಕೂಡ ಸಂಗೀತ ಇರುತ್ತದೆ. ಅಲ್ಲಿನ ಜನರು ನೆರಳಿಗೆ ಹೋಗುತ್ತಾರೆ. ಅಲ್ಲಿ ಕೂಡ ಸಂಗೀತ ಕೇಳುತ್ತಾರೆ. ಅಭಿವ್ಯಕ್ತಿ ಸ್ವಾತಂತ್ರ್ಯ ಎಂಬುದು ಪ್ರಕೃತಿ ನಿಯಮ ಅದನ್ನು ನಿಯಂತ್ರಣ ಮಾಡುವುದು ಅಥವಾ ದಮನ ಮಾಡುವುದು ಸರಿಯಿಲ್ಲ ಅಂತ ಹೇಳುತ್ತದೆ.

ಹೀಗೆ ಮಲ್ಲಿಕಾ ಘಂಟಿಯವರು 'ತುಳಿಯದಿರಿ ನನ್ನ' ಕವನ ಸಂಕಲನದ ಮೂಲಕ ಸೃಜನಶೀಲ ರಚನೆಯಲ್ಲಿ ತೊಡಗಿಸಿಕೊಂಡು ದಫನ್ ನಾಟಕದವರೆಗೆ ಹತ್ತು ಹಲವು ಕೃತಿಗಳನ್ನು ರಚಿಸಿದ್ದಾರೆ. ಗ್ರಾಮ ಜೀವನದ ಅನುಭವ, ಎಡಪಂಥೀಯ ವಿಚಾರಧಾರೆ ಹಾಗೂ ಮಹಿಳಾ ಸಂವೇದನೆಗಳನ್ನು ತಮ್ಮ ಮಾತು ಕೃತಿಯಲ್ಲಿ ತೀವ್ರವಾಗಿ, ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತಿರುವ ಕೆಲವೇ ಸಾಹಿತಿಗಳಲ್ಲಿ ಮಲ್ಲಿಕಾ ಘಂಟಿ ಪ್ರಮುಖರು. ಬಂಡಾಯದ ಬದ್ಧತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಪ್ರಜ್ಞಾವಂತ ಹೋರಾಟಗಾರರಲ್ಲಿ ಮಲ್ಲಿಕಾ ಘಂಟಿಯವರೂ ಸೇರಿದ್ದಾರೆ.

## ಕೊನೆಟಿಪ್ಪಣಿಗಳು

೧. ಬಂಡಾಯ ಸಾಹಿತ್ಯ – ಸಂದರ್ಭ ಮೀಮಾಂಸೆ, ಬಂಜಗೆರೆ ಜಯಪ್ರಕಾಶ್, ೨೦೦೯, ಪು. ೯
೨. ಅದೇ., ಪು. ೧೦
೩. ಅದೇ., ಪು. ೧೧, ೧೯
೪. ಅದೇ., ಪು. ೧೫
೫. ಉದ್ಧೃತ : ಕೆಂಪಹೊನ್ನಯ್ಯ, ರೂಪ ಹಾಸನ ಅವರ ಕವಿತೆಗಳ ವಿಚಾರ ವಿಮರ್ಶೆ, ೨೦೧೪, ಪು. ೪
೬. ಸಂಚಿ ಹೊನ್ನಮ್ಮ : ಹದಿಬದೆಯಧರ್ಮ, ಪು. ೯
೭. ಕನ್ನಡ ಸಾಹಿತ್ಯ ಸಮೀಕ್ಷೆ, ಜಿ.ಎಸ್.ಶಿವರುದ್ರಪ್ಪ, ಪು. ೧೯
೮. ರೊಟ್ಟಿ ಮತ್ತು ಹುಡುಗಿ, ೧೯೯೯, ಮುನ್ನುಡಿ, ಪು. ೧
೯. ಅದೇ., ಪು. ೧
೧೦. ಚಾಜ, ಪರಿಷ್ಕೃತ ಮುದ್ರಣ, ೨೦೧೫, ಪು. ೭೪
೧೧. ಕಾಯಕ ವಿಭೂತಿ, ವೆಂಕಟಗಿರಿ ದಳವಾಯಿ, ಪು. ೮೦೬
೧೨. ಚಾಜ, ಪು. ೨೭
೧೩. ಅದೇ., ಪು. ೨೭, ೩೩
೧೪. ಅದೇ., ಪು. ೬೮
೧೫. ಅದೇ., ಮುನ್ನುಡಿ, ಪು. ೬
೧೬. ಅದೇ., ಪು. ೭
೧೭. ಅದೇ., ಪು. ೭೪

## ಅಧ್ಯಾಯ ನಾಲ್ಕು

# ಜೀವನ ಚರಿತ್ರೆಗಳ ಅಧ್ಯಯನ

### ಜೀವನ ಚರಿತ್ರೆ ಎಂದರೇನು?

ವ್ಯಕ್ತಿಯೊಬ್ಬನ ಸಮಷ್ಟಿ ವ್ಯಕ್ತಿತ್ವವನ್ನು ವ್ಯಷ್ಟಿಯಾಗಿ ರೂಪಿಸುವುದಕ್ಕೆ 'ಜೀವನಚರಿತ್ರೆ' ಎಂದು ಕರೆಯುತ್ತೇವೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಒಬ್ಬ ವ್ಯಕ್ತಿಯ ಬಾಳಿನ ವಿಚಾರವಾಗಿ ಬರೆದ ಕಥೆ ಜೀವನಚರಿತ್ರೆ. ಇದು ಸಾಹಿತ್ಯ ಕ್ಷೇತ್ರದ ಅತ್ಯಂತ ಸರಳ, ಸ್ಪಷ್ಟ, ಪರಿಣಾಮಕಾರಿಯಾದ ಪ್ರಕಾರವಾಗಿದೆ. ಇದು ಸಮಕಾಲೀನ ವ್ಯಕ್ತಿ ಇಲ್ಲವೇ ಇತಿಹಾಸದಲ್ಲಿ ಆಗಿಹೋದವರ ವ್ಯಕ್ತಿತ್ವ, ಸಾಧನೆ, ಜೀವನವನ್ನು ಒಳಗೊಂಡು ಸಮಗ್ರವಾಗಿ ರೂಪುಗೊಳ್ಳುತ್ತದೆ.

### ವ್ಯಾಖ್ಯಾನಗಳು

ಜೀವನ ಚರಿತ್ರೆಯನ್ನು ಕುರಿತು ಕೆಲವರು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳೆಂದರೆ

೧. ಆಲ್‌ಫ್ರೆಡ್ ಆರ್ ಕಾಂಕ್ಲಿಂಗ್ ಪ್ರಕಾರ ಜೀವನ ಚರಿತ್ರೆ ಎಂದರೆ, "ನೇರವಾಗಿ, ಸರಳವಾಗಿ, ನಿರ್ಭಯವಾಗಿ ಹಾಗೂ ಉದಾರವಾಗಿ ಉಕ್ತಗೊಂಡ ಸತ್ಯವೇ ಜೀವನ ಚರಿತ್ರೆಯ ಸಂಮೋಹನ ಗುಣ".[೧]

೨. ಎಚ್.ಡಬ್ಲ್ಯೂ.ಲಾಂಗ್‌ಫೆಲೋನ ಪ್ರಕಾರ, "ಬೇರೆಬೇರೆ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರ ಬಗ್ಗೆ ಜನಸಾಮಾನ್ಯರಲ್ಲಿರುವ ಗೌರವಾದರಗಳನ್ನು ಸಮರ್ಪಿಸುವ ಇಲ್ಲವೇ ಆಯಾ ವ್ಯಕ್ತಿಯ ಆದರ್ಶಗಳನ್ನು ಮೇಲ್ಪಂಕ್ತಿಯಾಗಿಸಿಕೊಂಡು ಬದುಕುವ ಸದವಾಕಾಶವ ದೊರಕಿಸಿಕೊಡುವ ಮಾರ್ಗವೇ ಜೀವನ ಚರಿತ್ರೆ"[೨] ಎನ್ನಬಹುದು.

### ಜೀವನಚರಿತ್ರೆಯ ಹಿನ್ನೆಲೆ

ಇದು ಪಾಶ್ಚಾತ್ಯ ಹಿನ್ನೆಲೆಯಿಂದ ಕನ್ನಡಕ್ಕೆ ಬಂದ ಸಾಹಿತ್ಯ ಪ್ರಕಾರ. ಇಂಗ್ಲಿಷ್‌ನಲ್ಲಿ ಜೀವನ ಚರಿತ್ರೆ ರಚನೆಗೆ ಜೇಮ್ಸ್ ಬಾಸ್‌ವೆಲ್ ಬುನಾದಿಯನ್ನು ಹಾಕಿಕೊಟ್ಟವನು. ಡಾ. ಸಾಮ್ಯುಯಲ್ ಜಾನಸನ್‌ರನ್ನು ಕುರಿತು ಅವರ ಸಮಕಾಲೀನನಾದ ಬಾಸ್‌ವೆಲ್ ಬರೆದ 'Boswell's life of Johnson' ಜೀವನ ಚರಿತ್ರೆ ರಚನೆಗೆ ನಾಂದಿಯಾಯಿತೆನ್ನಬಹುದು.

ಇಂದು ಜೀವನ ಚರಿತ್ರೆ ವಿಭಿನ್ನ ಆಯಾಮಗಳಲ್ಲಿ ಮೂಡಿಬರುತ್ತಿದೆ. ಜೀವನ ಚರಿತ್ರೆಯು ಬದುಕು, ಬರಹ, ಸಾಧನೆ, ವ್ಯಕ್ತಿಚಿತ್ರ ಹೀಗೆ ವಿವಿಧ ಮುಖಗಳಲ್ಲಿ ಮೂಡಿಬರುವ

ಮೂಲಕ ತುಂಬಾ ಜನಪ್ರಿಯವಾಗಿದೆ. ಜೀವನ ಚರಿತ್ರೆ ಇತ್ತೀಚೆಗೆ ತುಂಬಾ ಬೆಳವಣಿಗೆಯನ್ನು ಹೊಂದುತ್ತಿದೆ. ಇದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಷ್ಟೊಂದು ವೈವಿಧ್ಯತೆಯನ್ನು ಸಾಧಿಸಿಲ್ಲವಾದರೂ ಸಮೃದ್ಧವಾಗಿದೆ. ಆದರೂ, ವೈಚಾರಿಕ ಪ್ರಜ್ಞೆಯ ನೆಲೆಯಲ್ಲಿ ವಿಶ್ಲೇಷಣಾತ್ಮಕವಾಗಿ ರೂಪುಗೊಳ್ಳುವ ಜೀವನಚರಿತ್ರೆಯು ಇಂದು ವ್ಯಾಪಕವಾಗಿ ಹರಡಿಕೊಳ್ಳುವ ಮೂಲಕ ಚರಿತ್ರೆಯ ಒಂದು ಭಾಗವಾಗಿ, ವಿಶಿಷ್ಟ ಸಾಹಿತ್ಯಕ ಪ್ರಕಾರವಾಗಿ ಕಂಡುಬರುತ್ತದೆ.

**ಜೀವನಚರಿತ್ರೆಯ ಸ್ವರೂಪ, ಲಕ್ಷಣಗಳು**

ಯಾವುದೇ ಸಮಾಜ ಸಂಸ್ಕೃತಿಯ ಅಭಿವ್ಯಕ್ತಿಯಲ್ಲಿ ಜೀವನ ಚರಿತ್ರೆ ಮಹತ್ವವನ್ನು ಪಡೆದುಕೊಂಡಿದೆ. ಒಬ್ಬ ವ್ಯಕ್ತಿಯ ವಿಶಿಷ್ಟ ವ್ಯಕ್ತಿತ್ವದ ಅನಾವರಣದ ನೆಲೆಗಟ್ಟಿನಲ್ಲಿ ರೂಪುಗೊಳ್ಳುವ ಜೀವನಚರಿತ್ರೆಯು ನೆನಪುಗಳನ್ನು ಅಗತ್ಯವಾಗಿ ಬೇಡುತ್ತದೆ. ಅದು ವ್ಯಕ್ತಿಕೇಂದ್ರಿತ ನೆಲೆಯಲ್ಲಿ ನಿಲ್ಲದೆ, ವ್ಯಕ್ತಿಯ ಗುಣ, ಆದರ್ಶಗಳು ಪ್ರತಿಫಲಿತವಾಗುವಂತೆ ಮಾಡುತ್ತದೆ. ಸಾಂಸ್ಕೃತಿಕ ಬದುಕಿನ ಜ್ಞಾನ, ಕಲಾತ್ಮಕತೆ ಮತ್ತು ಅಧಿಕೃತತೆ – ಇವು ಜೀವನ ಚರಿತ್ರೆಯ ಬಹುಮುಖ್ಯ ಅಂಶಗಳು.

ಜೀವನ ಚರಿತ್ರೆಯು ತನ್ನದೇ ಆದ ಲಕ್ಷಣವನ್ನು ಒಳಗೊಂಡಿದೆ.

೧. ಇದು ಒಬ್ಬ ವ್ಯಕ್ತಿಯ ಬಾಳನ್ನು ಕುರಿತದ್ದಾಗಿರುತ್ತದೆ.

೨. ವ್ಯಕ್ತಿಯ ಗುಣ ಆದರ್ಶಗಳನ್ನು ತಿಳಿಸುತ್ತದೆ.

೩. ವ್ಯಕ್ತಿತ್ವದ ವಿಶಿಷ್ಟ ನೆಲೆಗಟ್ಟಿನಿಂದ ರೂಪುಗೊಂಡಿರುತ್ತದೆ.

೪. ವ್ಯಕ್ತಿಗೆ ಸಂಬಂಧಿಸಿದ ಅನೇಕ ವಿಚಾರಗಳನ್ನು ಕೂಲಂಕಷವಾಗಿ ತಿಳಿಸುತ್ತದೆ.

೫. ಹೊಗಳಿಕೆ, ತೆಗಳಿಕೆಗೆ ಅವಕಾಶವಿರುವುದಿಲ್ಲ.

೬. ವ್ಯಕ್ತಿಯ ಗುಣಾವಗುಣಗಳನ್ನು ಹೊಮ್ಮಿಸುವಂತಿರುತ್ತದೆ.

೭. ಓದುಗ ತಿಳಿಯಲೇಬೇಕಾದ ಅನೇಕ ಸಂಗತಿಗಳನ್ನು ತಿಳಿಸುತ್ತದೆ.

೮. ವ್ಯಕ್ತಿಯು ಬಾಳಿದ ಪರಿಸರದ ಚಿತ್ರಣವಿರುತ್ತದೆ.

ಹೀಗೆ ಇನ್ನೂ ಹಲವಾರು ಗುಣಲಕ್ಷಣಗಳನ್ನು ಜೀವನಚರಿತ್ರೆಯು ಹೊಂದಿದ್ದು ನಾಯಕನ ವ್ಯಕ್ತಿತ್ವ ವಿಕಸನದ ಬಹುಮುಖ್ಯ ಅಂಶಗಳನ್ನು ತಿಳಿಸುತ್ತದೆ. ಜೀವನಚರಿತ್ರೆಯು ವೈಭವೀಕರಣಗೊಳ್ಳದಂತೆ ರಚನೆಯಾಗಬೇಕು. ಯಾವುದೇ ಪೂರ್ವಗ್ರಹ ಪೀಡಿತರಾಗದೆ ಬರೆಯಬೇಕು. ಮಾಹಿತಿಗಳನ್ನು ತಿರುಚಿ ಬರೆಯಬಾರದು. ಜೀವನಚರಿತ್ರೆಯು ಪ್ರಮುಖವಾಗಿ ಎರಡು ರೀತಿಯಲ್ಲಿ ಕಂಡುಬರುತ್ತದೆ:

೧. ಒಬ್ಬ ವ್ಯಕ್ತಿಯ ಪರಿಚಯ ಜೊತೆಗೆ ಅವರ ಇಡೀ ಬದುಕಿಗೆ ಪೂರಕವಾದ ಸಾಮಾಜಿಕ ಸಂಗತಿಗಳನ್ನು ಒದಗಿಸುವುದು.
೨. ವ್ಯಕ್ತಿಯ ಬದುಕಿನಲ್ಲಿ ನಡೆದ ಹೋರಾಟ, ಸಂಘಟನೆ, ಬುದ್ಧಿವಂತಿಕೆ, ಚಾಣಾಕ್ಷತನ ಇವುಗಳನ್ನು ಒಳಗೊಳ್ಳುವುದು.

**ಜೀವನ ಚರಿತ್ರೆಯ ಮಹತ್ವ**

೧. ವ್ಯಕ್ತಿಗತವಾಗಿ ವೈಯಕ್ತಿಕ ನೆಲೆಯಲ್ಲಿ ಜೀವನ ಚರಿತ್ರೆಯು ಸಾಗುವುದರಿಂದ ಅವರ ಸಾಧನೆಗಳನ್ನು, ಕೊಡುಗೆಗಳನ್ನು ತಿಳಿದುಕೊಳ್ಳಬಹುದು.
೨. ನಾಯಕತ್ವ ಗುಣ ಬೆಳೆಸಲು ಸಹಾಯಕಾರಿ
೩. ಪರಿಸರದ ಪರಿಚಯವಾಗುತ್ತದೆ.
೪. ಒಂದು ಸಾಂಸ್ಕೃತಿಕ ಪರಿಸರದಿಂದ ಜೀವನಚರಿತ್ರೆ ಉಗಮವಾಗುತ್ತದೆ.
೫. ವೈಚಾರಿಕ ಮತ್ತು ವೈಜ್ಞಾನಿಕ ಅಂಶಗಳನ್ನು ಬೆಳೆಸುತ್ತದೆ.
೬. ವಾಸ್ತವ ಸಂಗತಿಗಳನ್ನು ತಿಳಿಸುತ್ತದೆ.
೭. ಜೀವನ ಚರಿತ್ರೆ ಓದುಗರಿಗೆ ಸ್ಫೂರ್ತಿದಾಯಕವೂ, ಪ್ರೇರಣದಾಯಕವೂ ಆಗಿರುತ್ತದೆ.
೮. ಚರಿತ್ರೆಯಲ್ಲಿ ದಾಖಲಾಗುತ್ತದೆ.

ಹೀಗೆ ಇನ್ನೂ ಹಲವಾರು ಉಪಯೋಗದೊಂದಿಗೆ ಜೀವನ ಚರಿತ್ರೆ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

**ಕನ್ನಡದಲ್ಲಿ ಬಂದಿರುವ ಜೀವನ ಚರಿತ್ರೆಗಳು**

ಕನ್ನಡ ಸಾಹಿತ್ಯದಲ್ಲಿ ಈ ಹೊತ್ತಿನವರೆಗೆ ಸಾಕಷ್ಟು ಜೀವನ ಚರಿತ್ರೆಗಳು ಹೊರಬಂದಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ: 'ಬಂಕಿಮಚಂದ್ರ ಚಟರ್ಜಿ' ಅವರನ್ನು ಕುರಿತು ಎ.ಆರ್.ಕೃಷ್ಣಶಾಸ್ತ್ರೀ ಅವರು ಸಮಗ್ರ ನೆಲೆಯ ಜೀವನ ಚರಿತ್ರೆ ಬರೆದಿದ್ದಾರೆ. ಅದೇ ರೀತಿ 'ವಿವೇಕಾನಂದ',ರನ್ನು ಕುರಿತು 'ಕುವೆಂಪು' 'ರಾಮಕೃಷ್ಣ ಪರಮಹಂಸ'ರನ್ನು ಕುರಿತು 'ಕಾರಂತ'ರು, 'ರವೀಂದ್ರನಾಥ ಟ್ಯಾಗೋರ್'ರನ್ನು ಕುರಿತು 'ಹಾಮಾನ', 'ಜಿ.ಪಿ.ರಾಜರತ್ನಂ' ಕುರಿತು 'ನೀಲತ್ತಳ್ಳಿ ಕಸ್ತೂರಿ', 'ಕುವೆಂಪು' ಅವರನ್ನು ಕುರಿತು ದೇಜಗೌ 'ಶಂಕರ್‌ನಾಗ್' ಅವರನ್ನು ಕುರಿತು 'ಅನಂತನಾಗ್' ಅವರು ಬರೆದ ಜೀವನ ಚರಿತ್ರೆಗಳು ಸಮಾಜ ಮತ್ತು ಬದುಕನ್ನು ಹಾಸುಹೊಕ್ಕಾಗಿಸಿ ರಚನೆಗೊಂಡಿವೆ.

**ಮಲ್ಲಿಕಾಘಂಟಿ ಅವರ ಜೀವನ ಚರಿತ್ರೆಗಳು**

ಮಲ್ಲಿಕಾಘಂಟಿ ಅವರು ಸಾಹಿತ್ಯದ ಇತರ ಪ್ರಕಾರಗಳೊಂದಿಗೆ ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ಅವುಗಳೆಂದರೆ: 'ಸಂಗೊಳ್ಳಿ ರಾಯಣ್ಣ', 'ಇಟಗಿ ಭೀಮವ್ವ' ಮತ್ತು

'ಅಹಲ್ಯಾಬಾಯಿ ಹೋಳ್ಕರ್'. ಈ ಬಗೆಯ ಐತಿಹಾಸಿಕ ವ್ಯಕ್ತಿಗಳನ್ನು ಕುರಿತು ವಿಶಿಷ್ಟ ನೆಲೆಯಲ್ಲಿ ಜೀವನ ಚರಿತ್ರೆ ಬರೆದಿರುವುದು ಘಂಟಿಯವರ ವಿಶೇಷ.

**ಅಹಲ್ಯಾಬಾಯಿ ಹೋಳ್ಕರ್**

'ಅಹಲ್ಯಾಬಾಯಿ ಹೋಳ್ಕರ್' ಜೀವನವನ್ನು ಕುರಿತು ಮಲ್ಲಿಕಾ ಘಂಟಿಯವರು ಅಪರೂಪದ ಜೀವನ ಚರಿತ್ರೆಯನ್ನು ಹೊರತಂದಿದ್ದಾರೆ. ಇದು ಅಜ್ಞಾತ ಚಾರಿತ್ರಿಕ ಮಹಿಳೆಯೊಬ್ಬಳ ಜೀವನದ ಯಶೋಗಾಥೆಯನ್ನು ಕುರಿತದ್ದಾಗಿದೆ. ಈ ಜೀವನ ಚರಿತ್ರೆಯು ಮರಾಠರ ಕಾಲಕ್ಕೆ ಸಂಬಂಧಿಸಿದಂತೆ ಅನೇಕ ಐತಿಹಾಸಿಕ ವಿಚಾರಗಳನ್ನು ತಿಳಿಸುತ್ತದೆ.

ಮಲ್ಲಿಕಾ ಘಂಟಿಯವರು ರಚಿಸಿದ 'ಅಹಲ್ಯಾಬಾಯಿ ಹೋಳ್ಕರ್' ಕುರಿತಾದ ಜೀವನಚರಿತ್ರೆ ಲೌಕಿಕ ಮತ್ತು ಆಧ್ಯಾತ್ಮಿಕ ಲೋಕದಲ್ಲಿ ದೇದೀಪ್ಯಮಾನವಾಗಿ ಬೆಳಗಿದ ಮಹಾನ್ ದೇವಿಯ ಜೀವನಗಾಥೆ. ಅಹಲ್ಯಾಬಾಯಿ ಹೋಳ್ಕರ್ ಪೇಶ್ವೆ ರಾಜಮನೆತನದ ಸೊಸೆ. ಈಕೆ ಕ್ಷಾತ್ರಗುಣಗಳನ್ನು ಹೊಂದಿದ್ದವಳು. ವೀರೋಚಿತವಾಗಿ ರಾಜ್ಯವಾಳಿದವಳು. ಅಧಿಕಾರ, ಸಂಪತ್ತುಗಳು ಐಷಾರಾಮಿ ಜೀವನ ಸಾಗಿಸಲು ಅಲ; ಲೋಕಕಲ್ಯಾಣಕ್ಕಾಗಿ ಎಂದು ಸಾಧಿಸಿ ತೋರಿಸಿದಾಕೆ. ಸಾಮಾನ್ಯ ಪ್ರಜೆಗಳಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ರಾಜ್ಯಭಾರ ಮಾಡಿದ ಅಹಲ್ಯಾಬಾಯಿ ಸಾರ್ಥಕ ಬದುಕಿಗೊಂದು ನಿದರ್ಶನ ಎಂಬುದನ್ನು ಚಿತ್ರಿಸಿದ್ದಾರೆ.

ರಾಜಕೀಯ ರಂಗದಲ್ಲಿ ಐತಿಹ್ಯವಾಗಿರುವ ಅಹಲ್ಯಾಬಾಯಿಯು ಎದುರಿಸಿದ ಮಾನಸಿಕ ಆಘಾತಗಳನ್ನು, ಯೌವನ ಹಾಗೂ ಇನ್ನಿತರ ಘಟ್ಟದ ಘಟನೆಗಳನ್ನು ಕತೆಯಂತೆ ಆಕರ್ಷಕವಾಗಿ ವಿವರಿಸಿದ್ದಾರೆ. ಈ ಜೀವನಚರಿತ್ರೆಯನ್ನು ಓದುತ್ತಾ ಹೋದಂತೆ ಇದೊಂದು ಕರಣಾರಸದ ಪ್ರವಾಹವೆನಿಸುತ್ತದೆ. ದಾಂಪತ್ಯದಲ್ಲಿ ವೈಫಲ್ಯತೆಯನ್ನು ಪಡೆದರೂ, ರಾಜಕೀಯ ರಂಗದಲ್ಲಿ ಇತಿಹಾಸ ನಿರ್ಮಾಣ ಮಾಡುವ ಆಕೆಯ ಅನೇಕ ಸಂಗತಿಗಳನ್ನು ಈ ಕೃತಿಯು ಅಭಿವ್ಯಕ್ತಪಡಿಸುತ್ತದೆ.

ಅಹಲ್ಯಾಬಾಯಿಯ 'ಜೀವನ' ಎಂಬ ಶೀರ್ಷಿಕೆಯೊಂದಿಗೆ ಪ್ರಾರಂಭವಾಗುವ ಈ ಕೃತಿಯು ಆಡಳಿತ ವೈಖರಿ, ಧಾರ್ಮಿಕ ಜೀವನ ಹೀಗೆ ವಿವಿಧ ಶೀರ್ಷಿಕೆಗಳಲ್ಲಿ ಚಿತ್ರಿತವಾಗಿದೆ. ಇದರಲ್ಲಿ ಅಹಲ್ಯಾಬಾಯಿಯ ಸಮಗ್ರ ವ್ಯಕ್ತಿತ್ವವನ್ನು ಕಟ್ಟಿಕೊಡುವ ಪ್ರಯತ್ನವಿದೆ. ಇತಿಹಾಸದ ಪುಟಗಳಿಗೆ ಸೇರಿದ ಇಂತಹ ಸಾಧಕಿಯನ್ನು, ಧೀಮಂತ ವ್ಯಕ್ತಿತ್ವವನ್ನು ಪರಿಚಯಿಸುವುದು ಕೃತಿಯ ಉದ್ದೇಶ. ಮಹಿಳೆಯ ಸಾಧನೆಯ ನೆಲೆಯಿಂದ ತುಂಬ ವಿಶಿಷ್ಟರಾಗಿರುವ ಅಹಲ್ಯಾಬಾಯಿ ಹೋಳ್ಕರ್ ತಮ್ಮ ಜೀವಿತ ಕಾಲದಲ್ಲಿ ಶಕ್ತಿಮೀರಿ ಕ್ರಿಯಾತ್ಮಕವಾಗಿದ್ದರು ಎಂಬುದನ್ನು ಈ ಕೃತಿಯು ಆಶಯ ರೂಪದಲ್ಲಿ ಗುರುತಿಸುತ್ತದೆ.

ಶಾಹು ಛತ್ರಪತಿ ಮತ್ತು ಮೊದಲನೇ ಬಾಜಿರಾಯನ ಕಾಲದಲ್ಲಿ ಧನಘರ್ ಜಾತಿಯ ಶಿಂಧೆ ಮನೆತನದಲ್ಲಿ ಹುಟ್ಟಿದವಳು ಕ್ಷಾತ್ರರತ್ನ ಅಹಲ್ಯಾಬಾಯಿ ಹೋಳ್ಕರ್ ಸುಬೇದಾರ್ ಮಲ್ಹಾರಾವ್ ಹೋಳ್ಕರ್‌ರ ಏಕಮಾತ್ರ ಪುತ್ರನಾದ ಖಂಡೇರಾವನ ಜತೆಗೆ ಎಂಟುವರ್ಷದ ಬಾಲೆ ಅಹಲ್ಯಳ ಮದುವೆ ರಾಜ್ಯ ವೈಭವದಿಂದಲೇ ನೆರವೇರಿತ್ತು. ಸ್ವಾಮಿಭಕ್ತ, ವೀರ, ಶೂರ, ಪರಾಕ್ರಮಿ ಮಾವನ ಆಶ್ರಯದಲ್ಲಿ ಬಾಲ್ಯವನ್ನು ಕಳೆದ ಅಹಲ್ಯಾಬಾಯಿ, ಮಾವನಿಂದ ಕ್ಷಾತ್ರ ತೇಜಸ್ಸನ್ನು, ಅತ್ತೆಯಿಂದ ಧಾರ್ಮಿಕ ವಿಧಿವಿಧಾನಗಳನ್ನು ಬಳುವಳಿಯಾಗಿ ಪಡೆದ ವಿಚಾರವನ್ನು ಹೇಳುತ್ತಾರೆ. ಆಗಿನ ಕಾಲದಲ್ಲಿದ್ದ ಸತಿಪದ್ಧತಿಯನ್ನು ವಿರೋಧಿಸಿದ ರೀತಿಯನ್ನು ಈ ಕೃತಿ ವಿಶೇಷವಾಗಿ ಚಿತ್ರಿಸುತ್ತದೆ. ಆನಂತರ ತಂದೆಯ ಹಾಗಿದ್ದ ಮಲ್ಹಾರಾವ್ ನಿಧನದಿಂದ ಬಂದೆರಗಿದ ಆಘಾತದಿಂದ ಚೇತರಿಸಿಕೊಂಡು ರಾಜ್ಯವನ್ನು ಆಡಳಿತಾತ್ಮಕವಾಗಿ ನಿಭಾಯಿಸಿದ ರೀತಿಯನ್ನು ಮನಕಲಕುವಂತೆ ಚಿತ್ರಿಸಿದ್ದಾರೆ.

ಈಕೆ ಮಲ್ಹಾರಾವ್ ಮನೆತನಕ್ಕೆ ಸೊಸೆಯಂತಿರಲಿಲ್ಲ, ಮಗನಂತಿದ್ದವಳು. ಇದನ್ನು ಕುರಿತು ಮಲ್ಹಾರಾವ್ ಹೀಗೆ ಹೇಳುತ್ತಾರೆ: ಮಗ ಖಂಡೇರಾವ್ ವಿಷಯಾಕ್ತನಾಗಿದ್ದು ಸತ್ತುಹೋದಾಗ ಸತಿ ಚಿತೆ ಏರುವುದಕ್ಕೆ ಸಿದ್ಧತೆ ನಡೆದಿರುತ್ತದೆ. ಈ ಸತಿ ಚಿತೆ ಏರುವುದನ್ನು ವಿರೋಧಿಸಿದ ಮಲ್ಹಾರಾವ್ "ಸತ್ತವನು ಮಗನಲ್ಲ ಸೊಸೆ, ಇದ್ದವಳು ಸೊಸೆಯಲ್ಲ ಮಗ"[3] ಎಂದು ಕೈಮುಗಿದು ಕೇಳಿಕೊಳ್ಳುವ ಸನ್ನಿವೇಶ ಇವಳ ವೀರತನವನ್ನು ತಿಳಿಸುತ್ತದೆ.

ಮಾಲೇರಾವ್ ಬಾಬಾಜಿ ಅಹಲ್ಯಾಬಾಯಿಯ ಮಗ. ಈತ ತಂದೆ ಸತ್ತ ನಂತರ ರಾಜ್ಯದ ಆಗುಹೋಗುಗಳನ್ನು ನೋಡಿಕೊಳ್ಳುವುದಕ್ಕಿಂತಲೂ ವಿಷಯಲೋಲುಪತೆಯ ಕಡೆಗೇ ಹೆಚ್ಚು ಗಮನಕೊಟ್ಟಿದ್ದ. ಈತನಿಗೆ ದುಷ್ಟ ಪ್ರವೃತ್ತಿಗಳೆಲ್ಲ ಮನೆಮಾಡಿಕೊಂಡಿದ್ದವು. ಅಹಲ್ಯಾ ಮಗನಿಗೆ ಎಷ್ಟೇ ಬುದ್ಧಿಹೇಳಿದರೂ, ತಿಳಿವಳಿಕೆ ಹೇಳಿದರೂ ಅವನು ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಬೇಜವಾಬ್ದಾರಿಯಿಂದ ಇರುತ್ತಾನೆ. ಮಾವನ ನಿಧನದ ನಂತರ ವಾರಸುದಾರನಾಗಬೇಕಾದ ಮಗನ ಬಗ್ಗೆ ಅಹಲ್ಯಾಬಾಯಿಗೆ ತುಂಬಾ ಪ್ರೀತಿ ಮತ್ತು ಭೀತಿಯಿತ್ತು. ಈ ಸಂದರ್ಭದಲ್ಲಿ ಮಗನಿಗೆ ಆತನ ಜವಾಬ್ದಾರಿಯನ್ನು ನೆನಪಿಸಿ ಉಪದೇಶ ರೂಪವಾದ ಪತ್ರವನ್ನು ಬರೆಯುತ್ತಾಳೆ.

ಆದರೂ ಮಾಲೇರಾವ್ ಬಾಬೂಜಿ ಉತ್ತಮ ಮಾರ್ಗವನ್ನು ಹಿಡಿಯದೆ ಇದ್ದಾಗ ಚಿಂತಿತರಾದ ಅಹಲ್ಯಾಬಾಯಿಯು ಬದುಕಿನಲ್ಲಿ ಪತಿ ಸುಖ-ಮಗನ ಸುಖ ದೊರೆಯದೆ ಹೋದ ಸಂದರ್ಭ, ಕೌಟುಂಬಿಕ ದುಃಖದ, ಸಂಕಟದ ಸರಪಳಿಗಳು ಆಕೆಯ ಕೊರಳನ್ನು ಒಂದರ ನಂತರ ಒಂದು ಬಿಗಿಯುತ್ತಲೇ ಇರುವ ರೀತಿ, ಕೌಟುಂಬಿಕ ಆಘಾತದಿಂದ ಅಹಲ್ಯಾಬಾಯಿಯವರ ಜೀವನದ ಆಸೆಗಳೆಲ್ಲ ಕಮರಿ ಹೋದ ಸ್ಥಿತಿ – ಹೀಗೆ ಅನೇಕ ಸಂಗತಿಗಳನ್ನು ಕರುಳು ಮಿಡಿಯುವಂತೆ ಚಿತ್ರಣ ಮಾಡಿದ್ದಾರೆ.

ದೇವರು, ದೈವ, ಧರ್ಮ, ಕರ್ಮಗಳ ಬಗ್ಗೆ ಬಹಳಷ್ಟು ಭಯ ಭಕ್ತಿಯಿಂದ ಬಾಳಿದವಳು ಅಹಲ್ಯಾಬಾಯಿ. ಬಡವರೂ ನಿರ್ಗತಿಕರು, ಅಸಹಾಯಕರನ್ನು ಕಂಡರೆ ಕೊಡುಗೈಯಿಂದ ದಾನ ಮಾಡುತಿದ್ದವಳು. ಅಂತಹ ತಾಯಿಯ ಹೊಟ್ಟೆಯಲ್ಲಿ ಅಮಾನವೀಯ, ಹಿಂಸಾಪ್ರಿಯನಾದ ಮಗ ಹುಟ್ಟಿ ಆಕೆಗೆ ಇಳಿವಯಸ್ಸಿನಲ್ಲಿ ಊರುಗೋಲಾಗದೆ ನೆತ್ತಿಯ ಮೇಲೆ ತೂಗುವ ಕತ್ತಿಯಾದ.

ಮಾಲೇರಾವ್ ಅವರ ಹಿಂಸಾಪ್ರಿಯತೆಗೆ ಒಂದು ಸಾಕ್ಷಿ ಕೊಡುವುದಾದರೆ: ಅಹಲ್ಯಾ ಬೆಳೆಸಿಕೊಂಡು ಬಂದ ಸತ್‌ಸಂಪ್ರದಾಯಗಳಲ್ಲಿ ಬ್ರಾಹ್ಮಣರಿಗೆ ದಾನಧರ್ಮ ಮಾಡುವುದನ್ನು ಅರಿತಿದ್ದ ಮಗ ಬಂಗಾರದ ತಟ್ಟೆಯಲ್ಲಿ ಚೇಳು, ಏಡಿ, ವಿಷಜಂತುಗಳನ್ನು ಇಟ್ಟು ರೇಷ್ಮೆವಸ್ತ್ರ ಹೊದಿಸಿ ಕೊಡುತ್ತಾನೆ. ದಾನ ಸ್ವೀಕರಿಸಿದ ಬಡಬ್ರಾಹ್ಮಣರು ಏನು ಅರಿಯದೆ ಅದಕ್ಕೆ ಕೈಹಾಕಿ ಕಚ್ಚಿಸಿಕೊಂಡು ನೋವಿನಿಂದ ವಿಲವಿಲನೆ ಒದ್ದಾಡುವುದನ್ನು ನೋಡಿ ಗಹಗಹಿಸಿ ನಗುತ್ತಾ ಸಂತೋಷಪಡುತ್ತಾನೆ. ಇಂತಹ ಮಾಲೇರಾವ್‌ನ ಕೃತ್ಯಗಳನ್ನು ವ್ಯಕ್ತಿತ್ವವನ್ನು ಈ ಜೀವನ ಚರಿತ್ರೆಯಲ್ಲಿ ಕಾಣಬಹುದು.

ಮಾವ–ಗಂಡನನ್ನು ಕಳೆದುಕೊಂಡ ಆಘಾತದಿಂದ ಚೇತರಿಸಿಕೊಳ್ಳಲು ಸಾಧ್ಯವಾಗ–ದಿರುವಾಗಲೇ ಅಹಲ್ಯಾಬಾಯಿಯು ಮಗ ಮಾಲೇರಾವ್ ನಿಧನಹೊಂದಿದರು. ಇದು ಆಕೆಗೆ ತೀವ್ರ ಆಘಾತವನ್ನುಂಟು ಮಾಡಿತು. ಆಕೆಯ ಸಂಬಂಧದ ಒಂದೊಂದೇ ಕೊಂಡಿಗಳು ಕಳಚಿದ ಸಂದರ್ಭ, ಅನಾಥತೆ, ಒಂಟಿತನಗಳನ್ನು ಲೇಖಕರು ಒಂದೊಂದೇ ಎಳೆಗಳನ್ನು ಬಿಡಿಸಿಡುತ್ತಾರೆ.

ಬಾಲ್ಯವಿವಾಹವನ್ನು ಮೊದಲು ತಡೆಗಟ್ಟಲು ಪ್ರಯತ್ನಮಾಡುತ್ತಾಳೆ. ರಾಜಾರಾಮ ಮೋಹನರಾಯರಿಗಿಂತ ಶತಮಾನಗಳ ಮೊದಲು ಬಾಲ್ಯವಿವಾಹಕ್ಕೆ ಅಂಕುಶ ಹಾಕಿ ಸ್ವತಃ ಮಗಳು ಮುಕ್ತಾಬಾಯಿಯನ್ನು ೧೮ನೇ ವಯಸ್ಸಿನಲ್ಲಿ ಮದುವೆ ಮಾಡುತ್ತಾಳೆ. ಸಮಾಜ ಸುಧಾರಣೆಗೆ ಮುಂದಾಗಿ ಅನೇಕ ಸುಧಾರಣೆಗಳನ್ನು ೨೨೫ ವರ್ಷಗಳ ಹಿಂದೆಯೇ ತನ್ನ ರಾಜ್ಯದಲ್ಲಿ ಜಾರಿಗೆ ತರುತ್ತಾಳೆ. ಇವುಗಳಲ್ಲಿ ಅನೇಕ ಸಮಾಜ ಸುಧಾರಣೆ ಕಾಯಿದೆ–ಕಾನೂನುಗಳು ಸ್ವತಂತ್ರ ಭಾರತದ ಸಂವಿಧಾನದಲ್ಲಿ ಅಡಕವಾಗಿವೆ. ಇದನ್ನು ನಮ್ಮನ್ನಾಳಿದ ಬ್ರಿಟಿಷರೇ ಒಪ್ಪಿಕೊಂಡ ದಾಖಲೆಗಳಿವೆ. ಡಾ. ಬಾಬಾಸಾಹೇಬ ಅಂಬೇಡ್ಕರರ ೨೦ನೇ ಶತಮಾನದ ಕನಸುಗಳು ೧೮ನೇ ಶತಮಾನದಲ್ಲಿಯೇ ಅಹಲ್ಯಾಬಾಯಿಯಲ್ಲಿ ಮೊಳಕೆ ಒಡೆದಿದ್ದವು.

ಅಹಲ್ಯಾಬಾಯಿಯಲ್ಲಿ ಆತ್ಮವಿಶ್ವಾಸ, ಪ್ರಾಮಾಣಿಕತೆ, ಪ್ರಜಾವಾತ್ಸಲ್ಯ, ನ್ಯಾಯನಿಷ್ಠುರತೆ, ಧೈರ್ಯ ಸಾಹಸ ಮನೋಭಾವ, ಸೌಜನ್ಯತೆ, ರಾಜಕೀಯ ಸೂಕ್ಷ್ಮತೆಗಳು ಅಪಾರವಾಗಿದ್ದವು.

ಹುಲಿಯಂಥ ಮಾವನ ಆಶ್ರಯದಲ್ಲಿ ಬಾಲ್ಯದಿಂದ ಬೆಳೆದ ಬಗೆ, ಧಾರ್ಮಿಕ, ಸಾತ್ವಿಕತೆಯ ಪ್ರಭಾವ ಅತ್ತೆಯಿಂದ ಬಂದದ್ದು, ಬದುಕಿನ ವಸಂತದ ದಿನಗಳಲ್ಲಿ ಕನಸುಗಣ್ಣಿನಿಂದ ಭ್ರಮಾತ್ಮಕ ಲೋಕ ಸೇರಿ, ಪ್ರೌಢಾವಸ್ಥೆಯಲ್ಲಿ ಸಹಜವಾಗಿ ಗಾಂಭೀರ್ಯತೆ, ವ್ಯವಹಾರಿಕ ಕುಶಲತೆ, ತಾಳ್ಮೆ ಮೈಗೂಡಿಸಿಕೊಂಡು ನಲವತ್ತನೆಯ ವಯಸ್ಸಿನಲ್ಲಿ ನೇರವಾಗಿಯೇ ರಾಜ್ಯಾಡಳಿತದ ಸೂತ್ರವನ್ನು ಹಿಡಿದ ಬಗೆಯನ್ನು ಒಂದೊಂದೇ ಎಳೆಗಳಾಗಿ ಓದುಗರ ಮುಂದೆ ತೆರೆದಿಡುತ್ತಾರೆ.

ಅಹಲ್ಯಾಬಾಯಿಯ ಏಕಮಾತ್ರ ಪುತ್ರಿ ಮುಕ್ತಾಬಾಯಿಗೆ ಒಂದು ಸಣ್ಣ ಜಾಗೀರುಕೊಟ್ಟು ಅಳಿಯ ಯಶವಂತರಾವ್‌ನನ್ನು ಕಣ್ಣೆದುರೇ ಇಟ್ಟುಕೊಂಡರು. ಮುಕ್ತಾಬಾಯಿಗೆ ಧೋಡಿಸಬಾ (ನತ್ಯಾಬಾ) ಎಂಬ ಗಂಡು ಮಗು ಹುಟ್ಟಿದ. ತನ್ನ ಕಾಲಾಂತರದಲ್ಲಿ ಹೋಳ್ಕರ ಗದ್ದುಗೆ ಏರಬೇಕಾದ ವಂಶದ ಕುಡಿಯೆಂದು ಅವನಿಗೆ ಶಿಕ್ಷಣ, ಶಿಕ್ಷೆಕೊಟ್ಟು ಒಳ್ಳೆಯ ಮೂರ್ತಿಮಾಡಲು ಪ್ರಯತ್ನಿಸಿದ್ದಳು. ಆದರೆ ನತ್ಯಾಬಾ ಅಹಲ್ಯೆಯ ಉಡಿಯಿಂದ ಜಾರಿ ಸಾವಿನ ದವಡೆ ಸೇರಿಕೊಳ್ಳುವ ಅನೇಕ ವಿಚಾರಗಳನ್ನು ಲೇಖಕರು ಓದುಗರ ಮುಂದೆ ತೆರೆದಿಡುತ್ತಾರೆ.

ಮೊಮ್ಮಗನ ನಿಧನಾನಂತರ ಮೊಮ್ಮಗಳು ಊರುಗೋಲಾಗಿದ್ದಳು. ಕಾಲಾಂತರದಲ್ಲಿ ಅವಳೂ ಸಾವಿನ ದವಡೆಗೆ ಸಿಕ್ಕಿ ಅಹಲ್ಯಾಯಿಂದ ಕಣ್ಮರೆಯಾಗುತ್ತಾಳೆ. ನಂತರ ಅಳಿಯ ಹಾಗೂ ಮುಕ್ತಾಬಾಯಿಯು ಸಾಯುತ್ತಾರೆ. ಹೀಗಾಗಿ ಅಹಲ್ಯಾಬಾಯಿ ಮೌನಿಯಾಗಿ ಬದುಕಿನ ಎಲ್ಲಾ ಬಂಧನಗಳನ್ನು ಕಳಚಿಕೊಂಡು ಸಾವಿಗಾಗಿ ಜಾತಕ ಪಕ್ಷಿಯಂತೆ ಕಾಯುತ್ತಾಳೆ. ಆ ನಂತರ ಆಕೆ ವೈರಾಗ್ಯ ಬದುಕಿನ ಅರ್ಥ ಹುಡುಕಲು ಪ್ರಯತ್ನಿಸಿದಳು.

**ಆಡಳಿತ ವೈಖರಿ**

ಪರಂಪರಾಗತವಾಗಿ ರಾಜ್ಯಾಡಳಿತದ ಚುಕ್ಕಾಣಿ ಹಿಡಿದವರು ಮತ್ತು ಹಿಡಿಯಬೇಕು ಎಂದು ಸಮಾಜದ ಮುದ್ರೆ ಒತ್ತಿಸಿಕೊಂಡವರು ಗಂಡಸರೇ. ಇದಕ್ಕೆ ಅಪವಾದವಾಗಿ ಅಲ್ಲೊಬ್ಬ ಇಲ್ಲೊಬ್ಬ ಪುಟಿದ ಚೆಂಡಿನ ಹಾಗೇ ಎಲ್ಲವನ್ನು ಮೀರಿ ಬಂದ ಮಹಿಳೆಯರಿದ್ದಾರೆ. ಇಂತಹ ರೂಢಿಗತ ವ್ಯವಸ್ಥೆಯ ಮಧ್ಯದಲ್ಲಿ ಅಹಲ್ಯಾಬಾಯಿ ಆಡಳಿತದ ಚುಕ್ಕಾಣಿ ಹಿಡಿಯುತ್ತಾಳೆ. ಹಿತಶತ್ರುವಾದ ಗಂಗೋಭಾ ತಾತಾ ಹಿತೈಷಿಯ ಹಾಗೆ ಇದ್ದು ಸಾಮ್ರಾಜ್ಯವನ್ನು ತನ್ನ ಪರವಾಗಿ ಮಾಡಿಕೊಳ್ಳಲು ನೋಡುತ್ತಾನೆ. ಆಗ ಅಹಲ್ಯಾಬಾಯಿ ಆತನ ಮಾತುಗಳನ್ನು ತಳ್ಳಿಹಾಕಿ ತಾನೇ ಸ್ವತಃ ಅಧಿಕಾರ ನಡೆಸುತ್ತಾಳೆ.

ಅದೇ ರೀತಿ ರಾಘೋಬಾದಾರಾ ಪೇಶ್ವೆಯವರು ಹೋಳ್ಕರ್ ಅವರ ಖಾಸಗಿ ಸಂಪತ್ತಿನ ಮೇಲೆ ಕಣ್ಣಿಟ್ಟು ಇಂಧೂರದ ಮೇಲೆ ಧಾಳಿ ಮಾಡುತ್ತಾರೆ. ಇದು ಅಹಲ್ಯಾಬಾಯಿಯವರ ಸತ್ವಪರೀಕ್ಷೆಯ ಕಾಲವೂ ಹೌದು. "ಇಂತಹ ಸಂದರ್ಭ ಟೊಂಕಕ್ಕೆ

ಸೆರಗು ಸುತ್ತಿ ಕರ್ತವ್ಯದ ವೀರಕಂಕಣ ಧರಿಸಿ ಸಿದ್ಧಳಾಗುವ ಅಹಲ್ಯಾಬಾಯಿಯ ಶೌರ್ಯತನವನ್ನು ಮೆಚ್ಚಬೇಕಾಗುತ್ತದೆ."[3]

ಅಹಲ್ಯಾಬಾಯಿ ಆಡಳಿತ ಕೈಗೆತ್ತಿಕೊಂಡಾಗ ಸ್ವದೇಶ, ಖಾನದೇಶ, ನೇಮಾಡ, ಮಾಳವಾ, ಪಾಡೋಳಿ, ದುಂದಾಡ, ಜಾತವಾಡ, ಬುಂದೇಲಖಂಡ, ನರವರ, ಅಂತರವೇದ ಮತ್ತು ಮೇವಾಡ ಈ ಎಲ್ಲಾ ಪ್ರಾಂತಗಳನ್ನು ಆಡಳಿತದ ಅನುಕೂಲಕ್ಕಾಗಿ ಮಹಾಲ್, ಪಗರಣೆ ಮತ್ತು ಚಿಕ್ಕಪುಟ್ಟ ಊರುಗಳನ್ನಾಗಿ ವಿಭಾಗಿಸಿದಳು. ರಾಜ್ಯದ ಹೃದಯ ಭಾಗ ಇಂಧೂರ. ಧಾರ್ಮಿಕ ಮನೋವೃತ್ತಿಯ ಅಹಲ್ಯಾ ಮಾಹೇಶ್ವರವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿದಳು. ನರ್ಮದಾ ನದಿಯ ದಂಡೆಯ ಮೇಲೆ ಮಾಹೇಶ್ವರದಲ್ಲಿ ಒಂದು ಕೋಟೆ ಅಲ್ಲಿಯೇ ಬಾಯಿಯವರ ವಾಸ್ತವ್ಯ. ಇಡೀ ಹೋಳ್ಕರ್ ಸುಬೇದಾರತನ ಈ ಕೋಟೆಯಲ್ಲಿರುವುದಷ್ಟೇ ಅಲ್ಲದೆ ಇಂಧೂರಿನಲ್ಲಿ ಆರು ಕೋಟೆಗಳಲ್ಲಿ ಸಿಪಾಯಿ ಸಿಬ್ಬಂದಿಯನ್ನು ವ್ಯವಸ್ಥಿತವಾಗಿಯೇ ಇಟ್ಟಿದ್ದಳು.

ಚಾಂದವಡ, ಸೇಂದವಾ, ಅಶಿರಗಡ, ಗಣಾಣ, ಕುಶಾಲಗಡ, ಹಿಂಗ್ಲೆಜಗಡ – ಈ ಕೋಟೆಗಳ ವ್ಯವಸ್ಥೆಗೆ ಗೋವಿಂದ ಪಂಥಗಾನು, ವಿಸಾಜಿ, ಶಾಮರಾಜ, ದೇಶಪಾಂಡೆ, ನಾರೋಗಣೇಶ, ರಾಂಜೇಕರ, ಬಾರ್ಮಲದಾದ ಹೋಳ್ಕರ್ ಇವರೆಲ್ಲರಿಗೂ ರಾಜ್ಯಾಡಳಿತಕ್ಕೆ ಅನುಕೂಲ ಆಗುವ ಹಾಗೇ ಬೇರೆ ಬೇರೆ ಖಾತೆಗಳನ್ನು ಹಂಚಿದ್ದಳು. ಇದರಲ್ಲಿ ಗೋವಿಂದ ಪಂಥಗಾನು ಮತ್ತು ಬಾರ್ಮಲ ದಾರಾ ಇವರು ಬಾಯಿಯವರಿಗೆ ಅತ್ಯಂತ ಹತ್ತಿರದವರು; ಆತ್ಮೀಯರಾಗಿದ್ದರು. ಎಲ್ಲಕ್ಕಿಂತಲೂ ಮಿಗಿಲಾಗಿ ಮುಲ್ಹಾರಾವ್ ಅವರ ಉಪಪತ್ನಿಯಾದ ಹರಕುಬಾಯಿಯವರ ಅಗಾಧವಾದ ಬೆಂಬಲವಿತ್ತು. ಅಹಲ್ಯಾಬಾಯಿಯ ಯಶಸ್ವಿ ಆಡಳಿತದ ಒಳಗುಟ್ಟೇನೆಂದರೆ ಆಕೆ ತನ್ನ ಸುತ್ತಮುತ್ತಲಿನ ರಾಜರುಗಳ ಜೊತೆಗೆ ಹೊಂದಿದ್ದ ಸ್ನೇಹ ಸಂಬಂಧ. ತನ್ನ ಆಡಳಿತಾವಧಿಯಲ್ಲಿ ಜನಪರವಾದ ಕೆಲವು ಕಾಯ್ದೆ ಕಾನೂನುಗಳಲ್ಲಿ ಸುಧಾರಣೆ ತಂದರು. ತೆರಿಗೆ ಪದ್ಧತಿಯನ್ನು ಸೌಮ್ಯಗೊಳಿಸಿದರು.

**ಧಾರ್ಮಿಕ ಜೀವನ**

ಅಹಲ್ಯಾಬಾಯಿಯವರು ರಾಜಕೀಯದಲ್ಲಿ ಸಾಧಿಸಿದ್ದನ್ನು ಧಾರ್ಮಿಕ ಕ್ಷೇತ್ರದಲ್ಲಿಯೂ ಸಾಧಿಸಿದರು. ಮೂಲತಃ ಅಹಲ್ಯಾಬಾಯಿ ಧಾರ್ಮಿಕ ಪ್ರವೃತ್ತಿಯವರು. ಹೀಗಾಗಿ ಹಲವಾರು ದೇವರುಗಳ, ಗುಡಿಗಳನ್ನು ಕಟ್ಟಿಸಿದ ನಿದರ್ಶನಗಳನ್ನು ಲೇಖಕರು ತಿಳಿಸುತ್ತಾರೆ. ಹೊಸ ಹೊಸ ದೇವಸ್ಥಾನಗಳನ್ನು ಕಟ್ಟಿಸಿದರು. ಧರ್ಮಶಾಲೆಗಳನ್ನು ಕಟ್ಟಿಸಿದರು. ಇನಾಮು, ದತ್ತಿ, ದಾನ, ಧರ್ಮಗಳನ್ನು ವ್ಯಕ್ತಿಗಳಿಗೂ ದೇವಸ್ಥಾನಗಳಿಗೂ ಉದಾರವಾಗಿ ಕೊಟ್ಟಿರುವ ಅನೇಕ ಸಂಗತಿ ತಿಳಿಯುತ್ತದೆ.

ಅಹಲ್ಯಾಬಾಯಿಯ ಕೀರ್ತಿ ಭರತಖಂಡದುದ್ದಕ್ಕೂ ಹರಡಿದ್ದು ಆಕೆಯ ಧರ್ಮನಿಷ್ಠೆ ಮತ್ತು ಕ್ಷಾತ್ರತೇಜಸ್ಸಿನಿಂದ. ಅಹಲ್ಯಾಬಾಯಿಯವರ ಜೀವನ ವಿಧಾನದಿಂದ ಕಂಡುಬರುವ ಪ್ರಮುಖ ಅಂಶವೆಂದರೆ, ಆಕೆಯ ರಾಷ್ಟ್ರೀಯ ಮತ್ತು ಸಮಾಜ ಐಕ್ಯತೆಯ ದೃಷ್ಟಿ ಶೈವಪಂಥೀಯಳಾದ ಅಹಲ್ಯಾಬಾಯಿ ಅನ್ಯಧರ್ಮಗಳನ್ನು ಅತ್ಯಂತ ಗೌರವದಿಂದ ಕಂಡಿದ್ದಳು. ಬದುಕಿನ ಕೊನೆಯ ಗಳಿಗೆಯವರೆಗೂ ಪ್ರಜಾಹಿತಕ್ಕಾಗಿ, ಸತ್ಯ, ನ್ಯಾಯ ನಿಷ್ಠೆಯಿಂದ ಛಲದಿಂದ ಹೋರಾಟದಿಂದಲೇ ಬದುಕಿದವಳು. ನರ್ಮದಾ ನದಿ ದಂಡೆಯಲ್ಲಿರುವ ಮಹೇಶ್ವರ ವಾಡೇಯಲ್ಲಿ ಕೊನೆಯ ದಿನಗಳನ್ನು ಕಳೆದು ತೀರಿಕೊಂಡರು. ಅವರ ನೆನಪಿಗೆ ೧೭೯೫ ಆಗಸ್ಟ್ ತಿಂಗಳು ಶ್ರಾವಣಮಾಸದ ಚತುರ್ದಶಿಯ ದಿನ, ಹೋರಾಟದ ಚೇತನ ಅಹಲ್ಯಾಳ ದಿನವನ್ನಾಗಿ ಆಚರಿಸಲಾಗುತ್ತದೆ.

**ಇಟಗಿ ಭೀಮವ್ವ**

ಮಲ್ಲಿಕಾ ಘಂಟಿ ಅವರು ಬರೆದ ಇನ್ನೊಂದು ಜೀವನಚರಿತ್ರೆ 'ಇಟಗಿ ಭೀಮವ್ವ'ನನ್ನ ಕುರಿತದ್ದು. ಸಜ್ಜಲಗುಡ್ಡದ ಶರಣಮ್ಮ ಸಂಸಾರದಿಂದ ದೂರವಿದ್ದು, ವೀರ ವಿರಾಗಿನಿಯಾಗಿ ಆಧ್ಯಾತ್ಮದ ಸಾಧನೆಯಲ್ಲಿ ತೊಡಗಿಸಿಕೊಂಡವಳಾದರೆ, ಭೀಮಾಂಬಿಕೆ ಸಂಸಾರದಲ್ಲಿದ್ದೇ ಧಾರ್ಮಿಕ ಕ್ಷೇತ್ರದಲ್ಲಿ ನಿಶ್ಚಿತ ಗುರಿ ಮುಟ್ಟಿದ್ದವಳು.

ಒಂದು ಹಳ್ಳಿಯ ಸಾಮಾನ್ಯ ಹೆಣ್ಣುಮಗಳು ಧಾರ್ಮಿಕ ಕ್ಷೇತ್ರದೊಳಗೆ ಕೆಲವು ಸಲ ತೊಡಗಿಕೊಳ್ಳುವುದು ಇದೆಯಲ್ಲ, ಅದು ಕಾಲಾಂತರದೊಳಗೆ ಪುರಾಣ ರೂಪದಲ್ಲಿ ಬೆಳೆಯುವುದಿದೆ. ಜನರು ಆಕೆಯನ್ನು ದೇವತೆ ಮಾಡಿಬಿಡುತ್ತಾರೆ. ಅದರಂತೆ ಸಾಮಾನ್ಯ ಹೆಣ್ಣುಮಗಳಾದ ಭೀಮವ್ವ ಗಂಡಮಕ್ಕಳು ಸಂಸಾರದೊಳಗೆ ಇದ್ದವಳು. ಆದರೆ ಸಾತ್ವಿಕ ಶಕ್ತಿಯಿಂದ ಆಕೆ ಎಲ್ಲರಿಗಿಂತ ಭಿನ್ನವಾಗಿ ಕಾಣಿಸಿಕೊಂಡಳು.

ಶರಣರು ಎಂದೂ ಸಂಸಾರದಿಂದ ವಿಮುಖರಾಗಿ ಕಾವಿ ಕೇಶಾಂಬರವನ್ನು ಹೊದ್ದು ಅಡವಿಯಲ್ಲಿದ್ದು ಸಾಧನೆಗೈಯಬೇಕೆಂದವರಲ್ಲ. ಸಮಾಜವೆಂಬ ಅಡವಿಯಲ್ಲಿದ್ದೇ ಸಂಸಾರದ ಸಾರವನ್ನು ಹಂಸಕ್ಷೀರ ನ್ಯಾಯಕ್ಕೊಳಪಡಿಸಿ ಇರಬೇಕೆಂದವರು. ಇಂತಹ ಉದಾತ್ತ, ಉನ್ನತ ಮಾರ್ಗದಲ್ಲಿ ಭೀಮವ್ವ ನಡೆದು ಜಗತ್ತಿಗೆ ಮಾದರಿಯಾದಳು.

ಬಾಲ್ಯದಲ್ಲೇ ಆಧ್ಯಾತ್ಮಿಕದ ಕಡೆಗೆ ಒಲಿದಾಕೆ ಭೀಮವ್ವ ಅಕ್ಕಮಹಾದೇವಿ, ಮೀರಾಬಾಯಿಯ ಭಕ್ತಿಮಾರ್ಗದಲ್ಲಿ ನಡೆದು ಲೋಕಕಲ್ಯಾಣಕ್ಕಾಗಿ ಜೀವಭಾವವನ್ನು ಮುಡಿಪಾಗಿಟ್ಟ ಕೆಲವೇ ಕೆಲವು ಜನ ಮಹಾತ್ಮರಲ್ಲಿ ಸಜ್ಜಲಗುಡ್ಡದ ಶರಣಮ್ಮ ಮತ್ತು ಇಟಗಿಯ ಶ್ರೀ ಭೀಮವ್ವನವರು ಪ್ರಮುಖರು.

ನೈತಿಕ ನಿಷ್ಠೆಯ ಮೂಲಕ ದೈವತ್ವಕ್ಕೇರಿದ ಮಹಾಮಹಿಮೆ ಇಟಗಿ ಭೀಮವ್ವನ ಬದುಕೊಂದು ಮಹಾಕಾವ್ಯ. ಸಾಮಾನ್ಯರು ಅಸಾಮಾನ್ಯರಾಗುವ ಅವಕಾಶ ಈ ನೆಲದಲ್ಲಿ ಮಾತ್ರ ಸಿಗಲು ಸಾಧ್ಯ. ಸಂಸಾರದಲ್ಲಿದ್ದು ಪಾರಮಾರ್ಥಿಕ ಬದುಕನ್ನು ಸಾಗಿಸಿದ ಮಹಾಚೇತನಗಳ ನೆನಪು ನಮ್ಮ ಬದುಕನ್ನು ಅರ್ಥಪೂರ್ಣಗೊಳಿಸಲು ಸಾಧ್ಯ.

ಸಂಸಾರಸ್ಥರಾದ ಗಂಡು ಸನ್ಯಾಸಿಗಳು, ಯೋಗಿಗಳು ಆಗಿ ಪರಿವರ್ತನೆಗೊಂಡರೆ ಅಷ್ಟೊಂದು ಆತಂಕಪಡುವುದಿಲ್ಲ. ಆದರೆ ಮಗಳು ಮದುವೆ ನಿರಾಕರಿಸುವುದು ಅತ್ಯಂತ ಅಪರಾಧ ಎಂದು ಭಾವಿಸುತ್ತದೆ ಈ ಸಮಾಜ. ಇಟಗಿ ಭೀಮವ್ವ ಮದುವೆ ನಿರಾಕರಿಸಿದಾಗ, ತಂದೆತಾಯಿಗಳು ತಲೆಯಮೇಲೆ ಕೈಹೊತ್ತು ಕುಳಿತುಕೊಳ್ಳುತ್ತಾರೆ, ಚಿಂತಿಸುತ್ತಾರೆ, ಬಳಲುತ್ತಾರೆ. ಮಗಳ ಮನಸ್ಸನ್ನು ಒಲಿಸಿಕೊಳ್ಳುವ ಸಲುವಾಗಿ ಹತ್ತು ಹಲವು ವಿಧದ ಪ್ರಯತ್ನಕ್ಕೂ ತೊಡಗುತ್ತಾರೆ. ಶರಣಮ್ಮಳ ಬದುಕಿಗೆ ತಿರುವುಕೊಟ್ಟ ಗುರು ದೊಡ್ಡ ಬಸವಾರ್ಯರಾದರೆ, ಭೀಮವ್ವಳಿಗೆ ಧರ್ಮ – ದೈವ ತಿರುವನ್ನು ತೋರಿಸುತ್ತದೆ. ಭೀಮವ್ವಳ ಬದುಕಿನುದ್ದಕ್ಕೂ ಕಾಣಿಸಿಕೊಳ್ಳುವ ಧರ್ಮ ಒಬ್ಬ ವ್ಯಕ್ತಿಯಲ್ಲದೆ ಒಂದು ಶಕ್ತಿಯಾಗಿ ಪರಿಣಮಿಸಿದೆ. ಈ ಧರ್ಮ ಭೀಮವ್ವಳ ನಂಬಿಕೆ, ಶ್ರದ್ಧೆ, ಅಂತರಾತ್ಮದ ಧ್ವನಿ ಎಂದು ಭಾವಿಸಿದರೆ ತಪ್ಪಾಗಲಾರದು.

ಮದುವೆಯಾಗಿ ಉತ್ತಮ ಜೀವನ ನಡೆಸಿ, ಮಕ್ಕಳನ್ನ ಪಡೆದು, ಸಾವು–ನೋವು ಸುಖ–ದುಃಖಗಳನ್ನೆಲ್ಲ ಎರಡೂ ವ್ಯಪ್ರಗೊಳ್ಳದ ವ್ಯಕ್ತಿತ್ವ ಭೀಮವ್ವಳದು. ಹಿಂದೂ ಮತ್ತು ಮುಸ್ಲಿಂ ನಡುವಿನ ಸಂಘರ್ಷ ಇವತ್ತಿನ ಸಮಸ್ಯೆಯಲ್ಲ. ಇದು ಹಿಂದೆಯೂ ಇದ್ದ ಸಮಸ್ಯೆಯೇ ಆಗಿದೆ. ಕೆರೂರಿನ ಪೆಂಡೇ ಸಾಬು ಇಟಗಿಗೆ ಬಂದು ತನ್ನ ಅಣ್ಣನಾದ ಅರ್ಜುನಪ್ಪನೊಡಗೂಡಿ ಮಾಡಿದ ಧಾರ್ಮಿಕ ಚರ್ಚೆಯ ನೆನಪಿಗೆ ಇಟಗಿಯಲ್ಲಿ ಮಸೀದಿಯೊಂದನ್ನು ಭೀಮವ್ವ ಕಟ್ಟಿಸಿದ್ದಾಳೆ. ಅದೇರೀತಿ ಪೆಂಡೇಸಾಬರು ಕೆರೂರಿನಲ್ಲಿ ದರಗಾಕ್ಕೆ ಹೊಂದಿಕೊಂಡಂತೆ ಒಂದು ಮಠವನ್ನು ಸ್ಥಾಪಿಸಿದ್ದಾರೆ. ಹೀಗೆ ಭಾವೈಕ್ಯತೆ, ಧರ್ಮ ಸಮನ್ವಯತೆಗೆ ಒಬ್ಬ ಸಾಮಾನ್ಯ ಮಹಿಳೆ ದುಡಿದಿದ್ದನ್ನು ನಮ್ಮ ಚರಿತ್ರೆ ದಾಖಲಿಸದಿರುವುದು ಒಂದು ದೊಡ್ಡ ದುರಂತ.

ಆರಂಭದಲ್ಲಿ ಭೀಮವ್ವ ಸಂಸಾರದ ರಥವನ್ನು ನಡೆಸುತ್ತಿದ್ದಳು. ಆದರೆ ಬೆಳೆದಂತೆ ಅಧ್ಯಾತ್ಮದ ಸಾಧನೆಯಲ್ಲಿ ತೊಡಗಿ, ಬಡವರ ರೋಗಿಗಳ, ಅಸಹಾಯಕರ, ಸೇವೆಯನ್ನು ಮಾಡುತ್ತಾಳೆ. ಅಲ್ಲದೆ ಸಮಯ ಸಿಕ್ಕಾಗ ಕೈಯಾರೆ ನೂಲು ತೆಗೆಯುತ್ತಿದ್ದಳು. ಹಾಗೆಯೇ ಸ್ವಾತಂತ್ರ್ಯ ಚಳವಳಿಗೆ ಸ್ಫೂರ್ತಿ ನೀಡಿದ ಅಹಿಂಸಾ ಅಸ್ತ್ರವಾದ ಚರಕ, ಭೀಮವ್ವಳ ಕೈಯ ಆಶ್ರಯವನ್ನು ಪಡೆದಿತ್ತು ಎಂಬುದನ್ನು ಅಭಿಮಾನದಿಂದ ಹೇಳಿಕೊಳ್ಳಬಹುದು.

ಹೀಗೆ ಭೀಮವ್ವ - ಶರಣವ್ವರನ್ನು ವ್ಯಕ್ತಿಯಾಗಿದ್ದಾಗ ಕುಲದ ನೆಲೆಯಲ್ಲಿ ಅಪಮಾನಿಸಿದ ಸಮಾಜ, ಅವರೊಂದು ಶಕ್ತಿಯಾಗಿ ಬೆಳೆದು ಆಲದಮರವಾಗಿ ನಿಂತಾಗ ಹಾಡಿ ಹೊಗಳಲು ಮುಂದಾಗುವ ಭಟ್ಟಂಗಿಗಳು ಅವರನ್ನು ಆ ಕುಲದ ಮೂಲದಿಂದಲೇ ಕಿತ್ತುಕೊಂಡಿರುವುದನ್ನು ಅರ್ಥಮಾಡಿಕೊಳ್ಳಬೇಕು. ಸಾಮಾನ್ಯ ಮನೆತನದಲ್ಲಿ ಹುಟ್ಟಿ ನಮ್ಮ ನಿಮ್ಮ ಹಾಗೆ ಬೆಳೆದು ಲೋಕರೂಢಿಗೊಳಪಟ್ಟ ಸಾಮಾಜಿಕ ಕಲ್ಯಾಣ ಬಯಸಿದ ಉದಾತ್ತ ವ್ಯಕ್ತಿತ್ವ ಭೀಮವ್ವಳದು.

**ವೀರ ಸಂಗೊಳ್ಳಿರಾಯಣ್ಣ**

ಚರಿತ್ರೆ ಮೇಲ್ಜಾತಿಯವರನ್ನು ಹೆಚ್ಚು ವೈಭವೀಕರಿಸಿದೆ. ಕೆಳಜಾತಿಯವರನ್ನು ಮರೆತಿದೆ. ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ಮೊದಲ ಕಹಳೆ ಊದಿದವಳು ಚೆನ್ನಮ್ಮ ಎಂದು ಚರಿತ್ರೆಯೊಳಗೆ ಸೇರಿಸಿಬಿಟ್ಟಿದ್ದಾರೆ. ಇದನ್ನು ಸರಿ ಅನ್ನಲೂ ಆಗುವುದಿಲ್ಲ. ತಪ್ಪು ಅನ್ನಲು ಆಗುವುದಿಲ್ಲ. ಅದೇ ಸಂದರ್ಭದೊಳಗೆ, ವೀರಭಂಟ ಸಂಗೊಳ್ಳಿ ರಾಯಣ್ಣನನ್ನು ದಾಖಲಿಸಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಚೆನ್ನಮ್ಮ ಮುಂಚೂಣಿಗೆ ಬರುತ್ತಾಳೆ; ರಾಯಣ್ಣ ಮರೆಯಾಗುತ್ತಾನೆ. ಇದಕ್ಕೆ ಇಲ್ಲಿನ ಜಾತಿವ್ಯವಸ್ಥೆ ಕಾರಣ. ಬ್ರಿಟಿಷರ ವಿರುದ್ಧ ಹೋರಾಟ ಮಾಡುವುದಿದೆಯಲ್ಲ ಅದು ಸಾಮಾನ್ಯ ಕೆಲಸ ಅಲ್ಲ. ವ್ಯಕ್ತಿಗತ ನೆಲೆಯಲ್ಲಿ ಸ್ವಾಭಿಮಾನಕ್ಕೆ ಧಕ್ಕೆ ಬಂದಾಗ ಸಿಡಿದೆದ್ದವ ರಾಯಣ್ಣ. ಅದು ಮುಂದೆ ಸಾಮುದಾಯಿಕ ಶಕ್ತಿಯಾಗಿ ಬೆಳೆಯುತ್ತದೆ. ಬ್ರಿಟಿಷರ ವಿರುದ್ಧ ಬಹಳ ದೊಡ್ಡ ರೂಪವಾಗಿ ಬೆಳೆಸಿ ಮೊಟ್ಟಮೊದಲಿಗೆ ಕರ್ನಾಟಕದಲ್ಲಿ ಸ್ವಾತಂತ್ರ್ಯದ ರಣಕಹಳೆ ಮೊಳಗಿದ್ದು ಕಿತ್ತೂರು ಸಂಸ್ಥಾನ ಅಂತ ಹೇಳಿ ಅದರಲ್ಲಿ ಬಹಳ ಪ್ರಮುಖನಾದವ ಸಂಗೊಳ್ಳಿರಾಯಣ್ಣ. ಕಿತ್ತೂರು ಚೆನ್ನಮ್ಮನ ಅಂಗರಕ್ಷಕನಾಗಿದ್ದವನು, ವೀರ ಸೈನಿಕನಾಗಿದ್ದವನು.

'ಸಂಗೊಳ್ಳಿರಾಯಣ್ಣ'ನನ್ನು ಚಾರಿತ್ರಿಕವಾಗಿ ಮಕ್ಕಳಿಗೆ ಪರಿಚಯಿಸುವ ಕಾರಣದಿಂದ ಬರೆದ ಜೀವನಚರಿತ್ರೆ ಇದಾಗಿದೆ.

ಬೆಳಗಾವಿ ಜಿಲ್ಲೆಯ ಕಿತ್ತೂರು ಒಂದು ಚಿಕ್ಕಹಳ್ಳಿ. ಹಿಂದೆ ಅದು ಕಿತ್ತೂರು ರಾಜ್ಯದ ರಾಜಧಾನಿಯಾಗಿದ್ದ ಊರು. ಧಾರವಾಡದಿಂದ ಉತ್ತರಕ್ಕೂ ಮತ್ತು ಬೆಳಗಾವಿಯಿಂದ ದಕ್ಷಿಣದವರೆಗೂ ಈ ರಾಜ್ಯದ ವಿಸ್ತಾರವಿತ್ತು. ಮೈಸೂರು, ಮಹಾರಾಷ್ಟ್ರ, ಹೈದ್ರಾಬಾದ್ ಹಾಗೂ ಗೋವಾ ರಾಜ್ಯಗಳ ಹಾಗೇ ಕಿತ್ತೂರು ಕೂಡ ಬಲಿಷ್ಠ ರಾಜ್ಯವಾಗಿತ್ತು. ಈ ರಾಜ್ಯವನ್ನು ಮಲ್ಲಸರ್ಜ ದೇಸಾಯಿ ಆಳುತ್ತಿದ್ದ. ಪ್ರಜಾಪ್ರಿಯನಾಗಿದ್ದ ಮಲ್ಲಸರ್ಜ ದೇಸಾಯಿಗೆ ಇಬ್ಬರು ಹೆಂಡತಿಯರು. ಹಿರಿಯ ರಾಣಿ ರುದ್ರಮ್ಮ. ಕಿರಿಯ ರಾಣಿ ಚೆನ್ನಮ್ಮ. ಪತಿಯ ಹಿತವರಿತು ಇಬ್ಬರು ನಡೆದುಕೊಳ್ಳುತ್ತಿದ್ದರು.

ಮಲ್ಲಸರ್ಜ ದೊರೆಗೆ ಹಿರಿಯ ಹೆಂಡತಿಯ ಹೊಟ್ಟೆಯಲ್ಲಿ ಮಗ ಹುಟ್ಟಿದ್ದ. ಆತನ ಹೆಸರು ಶಿವಲಿಂಗ ರುದ್ರಸರ್ಜ. ಈತ ಬೆಳೆದು ದೊಡ್ಡವನಾಗಿ ಕಿತ್ತೂರು ಸಿಂಹಾಸನವೇರಿ ರಾಜ್ಯಭಾರ ಮಾಡುವನೆಂದು ದಂಪತಿಗಳು ಕನಸು ಕಂಡಿದ್ದರು. ಮಗ ಯೌವನಕ್ಕೆ ಬರುವ ಮೊದಲೇ ರಾಜ ಮಲ್ಲಸರ್ಜ ತೀರಿಕೊಂಡ. ಇಬ್ಬರೂ ಹೆಂಡತಿಯರು ಗಂಡನ ಮರಣದಿಂದ ಕಂಗಾಲಾದರು. ಚೆನ್ನಮ್ಮ ಬಾಲ್ಯದಲ್ಲಿಯೇ ಸಾಹಸಿಯಾದ ಕಾರಣ ಎದೆಗುಂದದೆ ಮುನ್ನಡೆದಳು. ರಾಜ್ಯದ ಆಡಳಿತ ಸೂತ್ರವನ್ನು ಈಕೆಯೇ ತನ್ನ ಕೈಗೆ ತೆಗೆದುಕೊಂಡಳು. ಇದನ್ನು ನೋಡಿ ಅನೇಕ ಜನರು ಸಹಿಸಿಕೊಳ್ಳಲಾಗದೆ ಪಿತೂರಿಯನ್ನು ರೂಪಿಸುತ್ತಿದ್ದರು.

ವಯಸ್ಸಿಗೆ ಬಾರದ ಬಾಲಕನನ್ನು ಸಿಂಹಾಸನದಲ್ಲಿ ಕೂರಿಸಿ ಮಂತ್ರಿ ಪ್ರಧಾನಿಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದರ ಮೂಲಕ ರಾಜ್ಯವಾಳತೊಡಗಿದಳು. ಪಟ್ಟಗಟ್ಟಿದ ಮಗ ಸವತಿಯ ಮಗನಾಗಿದ್ದರೂ ಚೆನ್ನಮ್ಮ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನ ಹಾಗೆ ಬೆಳೆಸಿದಳು. ತಾನೇ ಸ್ವತಃ ಮುಂದೆ ನಿಂತು ಯುದ್ಧ ವಿದ್ಯೆಗಳನ್ನೆಲ್ಲಾ ಕಲಿಸಿದಳು. ಕುದುರೆ ಸವಾರಿ, ಕತ್ತಿವರಸೆ, ಆಡಳಿತದ ರೀತಿನೀತಿಗಳನ್ನೆಲ್ಲ ಶಿವಲಿಂಗ ರುದ್ರಸರ್ಜನಿಗೂ ಹೇಳಿಕೊಟ್ಟಳು. ಯುದ್ಧ ಕಲೆಯನ್ನು ಕರಗತ ಮಾಡಿಕೊಂಡಿದ್ದ ಚೆನ್ನಮ್ಮ ನೆರೆಹೊರೆಯ ರಾಜ್ಯಗಳ ಬಗ್ಗೆ ನಿರ್ಭಯವಾಗಿದ್ದಳು. ಸುತ್ತಮುತ್ತಲಿನ ರಾಜರುಗಳಿಗೆ ಚೆನ್ನಮ್ಮನ ಬಗ್ಗೆ ಒಂದು ರೀತಿಯ ಭಯವು ಇತ್ತು.

ಕಿತ್ತೂರಿನ ಮಣ್ಣು, ಗಾಳಿ, ನೀರಲ್ಲಿ ಶೌರ್ಯ ಸಾಹಸದ ಗುಣ ತುಂಬಿದ ಕಾರಣ ಜನರಲ್ಲಿ ಸಹಜವಾಗಿಯೇ ಆ ಗುಣಗಳು ತುಂಬಿದ್ದವು. ಕಿತ್ತೂರಿನ ಸಂಸ್ಥಾನದಲ್ಲಿಯೇ ಸಂಗೊಳ್ಳಿ ಎಂಬ ಊರಿಗೆ ಕೀರ್ತಿ ತರುವ ರೀತಿಯಲ್ಲಿ ಅಲ್ಲಿಯ ಯುವಕನೊಬ್ಬನಿದ್ದ: ಆತ 'ರಾಯಣ್ಣ'. ರಾಯಣ್ಣನ ತಂದೆ ತಾಯಿ 'ಭರಮಣ್ಣ' ಮತ್ತು 'ಕೆಂಚವ್ವ'. ಈ ರಾಯಣ್ಣ ಮಹಾಧೈರ್ಯವಂತ, ಸಾಹಸವಂತ.

ಬ್ರಿಟಿಷರು ಭಾರತದ ಒಂದೊಂದೇ ರಾಜ್ಯವನ್ನು ವಶಪಡಿಸಿಕೊಳ್ಳುತ್ತಿದ್ದ ಕಾಲದಲ್ಲಿ ಕಿತ್ತೂರು ಸಮೃದ್ಧವಾಗಿತ್ತು. ಸಂಪತ್ತಿನಿಂದ ಕೂಡಿದ ಕಿತ್ತೂರು ರಾಜ್ಯದ ಮೇಲೆ ಬ್ರಿಟಿಷರ ಕಣ್ಣುಬೀಳುವುದಕ್ಕೆ ತಡವಾಗಲಿಲ್ಲ. ಬ್ರಿಟಿಷರ ಕಣ್ಣು ತಮ್ಮ ರಾಜ್ಯದ ಮೇಲೆ ಬಿದ್ದಿರುವುದು ಗೊತ್ತಾದ ಚೆನ್ನಮ್ಮ ಕೈಕಟ್ಟಿ ಕುಳಿತುಕೊಳ್ಳುವಂತಿರಲಿಲ್ಲ. ಹಳ್ಳಿಹಳ್ಳಿಗೂ ಸೈನಿಕರನ್ನು ಕಳುಹಿಸಿ ಊರಲ್ಲೇ ಡಂಗೂರ ಸಾರಿಸಿದಳು. ಹಳ್ಳಿಯಲ್ಲಿದ್ದ ವೀರಸೈನಿಕರನ್ನೆಲ್ಲ ಕಿತ್ತೂರಿಗೆ ಕರೆಯಿಸಿಕೊಂಡಳು. ತನ್ನೆಲ್ಲ ಸೈನ್ಯವನ್ನು ಕಿತ್ತೂರಿನಲ್ಲಿ ಜಮಾಯಿಸಿದಳು. ಆಗ ಪ್ರಮುಖ ಪಾತ್ರವಹಿಸಿದವನು ಸಂಗೊಳ್ಳಿ ರಾಯಣ್ಣ. ಈ ಸಂದರ್ಭದಲ್ಲಿ ಆತ ತನ್ನ ಹಳ್ಳಿಯಿಂದ ಮತ್ತು

ತನ್ನೂರಿನ ಸುತ್ತಮುತ್ತಲಿನ ಹಳ್ಳಿಯಿಂದ ತಾನು ತರಬೇತಿ ನೀಡಿದ ಯುವಕರ ದಂಡನ್ನೇ ಕರೆತಂದನು.

ಸರದಾರ ಗುರುಸಿದ್ದಪ್ಪ ಕಿತ್ತೂರಿನ ಪ್ರಧಾನ ದಂಡನಾಯಕನಾಗಿದ್ದನು. ಕಾಲು ಕೆದರಿ ಬಂದ ಬ್ರಿಟಿಷರನ್ನು ಮಟ್ಟಹಾಕಲು ಸೈನ್ಯ ಕಿತ್ತೂರಿನಲ್ಲಿ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡು ಸಜ್ಜಾಗಿ ನಿಂತಿತ್ತು. ಧಾರವಾಡದ ಕಲೆಕ್ಟರಾಗಿದ್ದ ಥ್ಯಾಕರೆ ಎಂಬ ಅಧಿಕಾರಿ ಕಿತ್ತೂರಿನ ಖಜಾನೆಯನ್ನು ವಶಮಾಡಿಕೊಳ್ಳಲು ಸೈನ್ಯ ಸಮೇತ ಕಿತ್ತೂರಿಗೆ ೧೮೨೪ ಅಕ್ಟೋಬರ್ ೨೧ರಂದು ದಂಡೆತ್ತಿ ಬಂದನು. ಹೀಗೆ ದಂಡೆತ್ತಿಬಂದ ಥ್ಯಾಕರೆಯ ಸೈನ್ಯವನ್ನು ಕಿತ್ತೂರಿನ ಸೈನಿಕರು ವಿರೋಚಿತವಾಗಿ ಹೋರಾಡಿ ಹಿಮ್ಮೆಟ್ಟಿಸಿದ್ದರು. ಸೋತ ಥ್ಯಾಕರೆಗೆ ಸಿಟ್ಟು ನೆತ್ತಿಗೇರಿತ್ತು. ಈ ಸಲ ಹೆಚ್ಚು ಸೈನ್ಯ ಮತ್ತು ತೋಪುಗಳೊಂದಿಗೆ ಕಿತ್ತೂರಿಗೆ ಮುತ್ತಿಗೆ ಹಾಕಿದ. ಕಿತ್ತೂರಿನ ಕೋಟೆಯ ಬಾಗಿಲು ಮುಂದೆ ತೋಪುಗಳನ್ನು ನಿಲ್ಲಿಸಿ ಚೆನ್ನಮ್ಮನಿಗೆ ಬೆದರಿಕೆ ಒಡ್ಡಿದ. ಕೋಟೆ ಬಾಗಿಲು ತೆಗೆಯದಿದ್ದರೆ ಗುಂಡು ಹಾರಿಸಿ ಕೋಟೆಬಾಗಿಲನ್ನು ಒಡೆದು ಒಳಬರುತ್ತೇವೆ ಎಂದು ಚೆನ್ನಮ್ಮನಿಗೆ ಎಚ್ಚರಿಕೆ ನೀಡಿದ. ಕಿತ್ತೂರಿಗೆ ಅವಮಾನ ಮಾಡುತ್ತಿರುವ ಪರಂಗಿಯವರನ್ನು ಜೀವಸಹಿತ ಬಿಡಬಾರದೆಂದು ರಾಯಣ್ಣ ಹಲ್ಲು ಮಸೆಯುತ್ತಿದ್ದ. ಬಿಚ್ಚುಗತ್ತಿ ಚೆನ್ನಬಸಣ್ಣನ ಕತ್ತಿ ಅವನ ರುಂಡವನ್ನು ತುಂಡರಿಸಲು ಒರೆಯಲ್ಲಿಯೆ ಮಸೆಯುತ್ತಿತ್ತು. ಗುರಿಕಾರ ಬಾಳಣ್ಣನ ಬಂದೂಕಿನ ಗುರಿ ಥ್ಯಾಕರೆಯ ತಲೆ ಹಾರಿಸಲು ಹಾತೊರೆಯುತ್ತಿತ್ತು. ರಾಣಿ ಚೆನ್ನಮ್ಮ ಪರಿಸ್ಥಿತಿಯನ್ನೆಲ್ಲ ಅವಲೋಕಿಸಿ ಯುದ್ಧಕ್ಕೆ ಅಪ್ಪಣೆ ನೀಡಿದಳು.

ಕೋಟೆಯ ಬಾಗಿಲನ್ನು ಒಮ್ಮೆಲೇ ತೆಗೆದು 'ಹರಹರ ಮಹಾದೇವ' ಎನ್ನುತ್ತಾ ಸೈನಿಕರು ಸಾಗರದಂತೆ ನುಗ್ಗಿದರು. ಕಿತ್ತೂರಿನ ಹುಲಿಗಳು ರೆಪ್ಪೆ ಮುಟುಕಿಸುವುದರೊಳಗೆ ತೋಪು, ಫಿರಂಗಿ ಹಿಡಿದು ನಿಂತವರನ್ನು ಸುತ್ತುವರಿದರು. ಕ್ಷಣಾರ್ಧದಲ್ಲಿ ತಮ್ಮ ಕೈಕತ್ತಿಯಿಂದಲೇ ಇಂಗ್ಲಿಷರ ತೋಪುದಾರರ ತಲೆಗಳನ್ನು ನೆಲಕ್ಕೆ ಉರುಳಿಸಿ ತೋಪುಗಳನ್ನು ಕೋಟೆಯ ಒಳಗೆ ಸಾಗಿಸಿಬಿಟ್ಟರು. ಥ್ಯಾಕರೆಗೆ ಈ ವಿಷಯ ತಿಳಿದು ಹೇಗಾದರೂ ಮಾಡಿ ಚೆನ್ನಮ್ಮನನ್ನು ಸೆರೆಹಿಡಿಯಬೇಕೆಂದು ಹೆಚ್ಚು ಸೈನಿಕರನ್ನು ಕರೆದುಕೊಂಡು ಏರಿಬಂದನು. ರಾಣಿಯ ಪಕ್ಕದಲ್ಲಿಯೆ ಇದ್ದ ಬಾಳಪ್ಪನ ಕಣ್ಣಿಗೆ ಇದು ಬಿದ್ದಿತು. ತಕ್ಷಣವೇ ತನ್ನ ಕೈಯಲ್ಲಿಯ ಬಂದೂಕಿನಿಂದ ಗುರಿ ಇಟ್ಟು ಹೊಡೆದ ಕ್ಷಣಾರ್ಧದಲ್ಲಿಯೇ ಥ್ಯಾಕರೆಯ ತಲೆ ಹಾರಿ ನೆಲಕ್ಕೆ ಉರುಳಿತು. ಕಿತ್ತೂರಿನ ಸೈನಿಕರು ತಲೆಯನ್ನು ಖಡ್ಗಕ್ಕೆ ಸಿಕ್ಕಿಸಿಕೊಂಡು ಜಯಕಾರ ಹಾಕಿದರು. ಯುದ್ಧದಲ್ಲಿ ಕಿತ್ತೂರಿಗೆ ಜಯವಾಯಿತು.

ಇದರಿಂದ ಕೆಂಪು ಮುಖದ ಇಂಗ್ಲಿಷರಿಗೆ ಅಪಮಾನವಾಯಿತು. ಅಪಮಾನದಿಂದ ಕುದ್ದುಹೋದ ಇಂಗ್ಲಿಷ್ ಅಧಿಕಾರಿಗಳು ಭಾರತದಾದ್ಯಂತ ಇದ್ದ ತಮ್ಮ ಸೈನ್ಯದ ತುಕಡಿಗಳನ್ನೆಲ್ಲ ಒಂದುಗೂಡಿಸಿ ಮತ್ತೆ ಯುದ್ಧಕ್ಕೆ ಸಿದ್ಧರಾದರು. ಈ ಸಲ ಬ್ರಿಟಿಷರ ಕೈ ಮೇಲಾಯಿತು. ಅದಕ್ಕೆ ಒಳಗಿನವರು ಸಹಾಯ ಮಾಡಿದ್ದರು. ಕಿತ್ತೂರಿನ ಮದ್ದುಗುಂಡಿನ ಉಗ್ರಾಣದಲ್ಲಿ ದೇಶದ್ರೋಹಿಗಳು ನೀರು ಸುರಿದಿದ್ದರು.

ಯುದ್ಧದಲ್ಲಿ ಕಿತ್ತೂರಿನ ಮದ್ದುಗುಂಡು ಸಿಡಿಯದೇ ಹೋದಾಗ ಚೆನ್ನಮ್ಮ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ವ್ಯರ್ಥವಾಗಿ ಕಿತ್ತೂರು ರಾಜ್ಯದ ಪ್ರಜೆಗಳ ಪ್ರಾಣಹಾನಿಯಾಗುವುದನ್ನು ತಪ್ಪಿಸುವ ಸಲುವಾಗಿ, ಯುದ್ಧ ನಿಲ್ಲಿಸಿ ಆತ್ಮರಕ್ಷಣೆ ಮಾಡಿಕೊಳ್ಳಲು ತನ್ನ ಪ್ರಜೆಗಳಿಗೆ ಆಜ್ಞೆ ನೀಡಿದಳು. ಸರದಾರ ಗುರುಸಿದ್ದಪ್ಪ ಮತ್ತು ರಾಯಣ್ಣ ಸೇರಿ ರಾಣಿ ಚೆನ್ನಮ್ಮನನ್ನು ಕಾಪಾಡಲು ಪ್ರಯತ್ನಪಟ್ಟರು. ಆದರೆ ಸಾಧ್ಯವಾಗಲಿಲ್ಲ.

ಎಲ್ಲರನ್ನೂ ಬೈಲಹೊಂಗಲಕ್ಕೆ ಸಾಗಿಸಿ ಬಂಧನದಲ್ಲಿಟ್ಟರು. ರಾಯಣ್ಣ ಮತ್ತು ಉಳಿದವರನ್ನು ಧಾರವಾಡದ ಸೆರೆಮನೆಗೆ ಹಾಕಿದರು. ವಿಚಾರಣೆಯ ನಂತರ ರಾಯಣ್ಣ ಮತ್ತು ಸ್ನೇಹಿತರನ್ನು ಕೆಲವು ದಿವಸಗಳ ನಂತರ ಬಿಡುಗಡೆಗೊಳಿಸಿದರು. ಸೆರೆಮನೆಯಲ್ಲಿದ್ದ ರಾಯಣ್ಣ ಚಿಂತೆಯಿಂದ ಬಳಲಿ ಹೋಗಿದ್ದ. ಎಲ್ಲಕ್ಕಿಂತಲೂ ಮಿಗಿಲಾಗಿ ತನ್ನ ತಾಯಿನಾಡಿನಲ್ಲಿ ಕೆಂಪು ಮುಖದವರ ದರ್ಬಾರು ಕಂಡು ಒಳಗೊಳಗೆ ಕುದಿದು ಹೋಗಿದ್ದ.

ಅನಂತರ ರಾಯಣ್ಣ ದೇಶದ ಸ್ವಾತಂತ್ರ್ಯಕ್ಕಾಗಿ ಸಿದ್ಧತೆ ಮಾಡಿಕೊಳ್ಳಬೇಕಾಗಿತ್ತು. ರಾಯಣ್ಣ ಎಲ್ಲಾ ಸಿದ್ದತೆಯನ್ನು ಮಾಡಿಕೊಂಡು ಕಂಪನಿ ಸರಕಾರದ ವಿರುದ್ಧ ಯುದ್ಧ ಮಾಡಲು ಸನ್ನದ್ಧವಾಗಿದ್ದರೆ, ಅತ್ತ ಕಡೆ ಸೆರೆಮನೆಯಲ್ಲಿದ್ದ ಚೆನ್ನಮ್ಮ ಸಾವಿಗೆ ತುತ್ತಾಗುತ್ತಾಳೆ. ಚೆನ್ನಮ್ಮನ ಸಾವಿನ ಸುದ್ಧಿಯನ್ನು ಕೇಳಿ ದುಃಖಿತನಾದ ರಾಯಣ್ಣ ಸ್ವರ್ಗದಲ್ಲಿರುವ ರಾಣಿ ಚೆನ್ನಮ್ಮ ನೆಮ್ಮದಿಯಿಂದ ಇರಬೇಕಾದರೆ ಕಂಪನಿ ಸರಕಾರದ ಸ್ವಾಧೀನದಲ್ಲಿರುವ ಕಿತ್ತೂರನ್ನು ಬಿಡುಗಡೆಗೊಳಿಸಬೇಕು ಎಂದು ಸಂಕಲ್ಪ ಮಾಡಿದ. ಬೈಲಹೊಂಗಲದ ಕಟ್ಟಡದಲ್ಲಿ ಚೆನ್ನಮ್ಮನ ಸಮಾಧಿ ಮಾಡುವುದನ್ನು ಕೇಳಿ ರಾಯಣ್ಣ ಬೈಲಹೊಂಗಲಕ್ಕೆ ಜಂಗಮ ವೇಷದಲ್ಲಿ ಹೋಗುವನು. ಚೆನ್ನಮ್ಮನ ಸಮಾಧಿಯನ್ನು ಮುಟ್ಟಿ ಮತ್ತೆ ಪ್ರತಿಜ್ಞೆಯನ್ನು ಮಾಡುವನು. ದತ್ತುಪುತ್ರನಾದ ಶಿವಲಿಂಗಪ್ಪ ಕಿತ್ತೂರಿನ ಸಿಂಹಾಸನದ ಉತ್ತರಾಧಿಕಾರಿಯಾಗಿದ್ದ. ಅವನಿಗೆ ಕೇವಲ ಹದಿನಾಲ್ಕು ವರ್ಷ. ಅವನ ಹೆಸರಿನಲ್ಲಿಯೇ ಯುದ್ಧ ಹೂಡಲು ರಾಯಣ್ಣ, ರಾಯಣ್ಣನ ಗೆಳೆಯರು ಮುಂದಾದರು. ಈ ವಿಷಯವನ್ನು ಸೆರೆಮನೆಯಲ್ಲಿದ್ದ ವೀರಮ್ಮನಿಗೂ ತಿಳಿಸುವರು. ಆಕೆಯು ಆಶೀರ್ವಾದ ಮಾಡಿ ತನ್ನಲ್ಲಿರುವ ಒಡವೆ ಹಣವನ್ನೆಲ್ಲ ಯುದ್ಧದ ಖರ್ಚಿಗೆ ಬಳಸಿಕೊಳ್ಳಲು ಕೊಡುವಳು.

ಈ ನಡುವೆ ಯುದ್ಧದ ಸಿದ್ಧತೆಯಲ್ಲಿದ್ದಾಗಲೇ ಕಿತ್ತೂರಿನ ಕೇಸರಿ, ಸ್ವಾತಂತ್ರ್ಯ ಸೇನಾನಿ ವೀರ ಸಂಗೊಳ್ಳಿರಾಯಣ್ಣ ದೇಶದ್ರೋಹಿಗಳ ಮೋಸದ ಬಲೆಗೆ ಬಿದ್ದನು. ಕಂಪನಿ ಸರಕಾರದ ಸೈನಿಕರು ೧೮೩೧ ಜನವರಿ ೨೬ರಂದು ರಾಯಣ್ಣನನ್ನು ಗಲ್ಲಿಗೇರಿಸಿ ಕೊಂದರು.

ಕಿತ್ತೂರು ರಾಣಿ ಚೆನ್ನಮ್ಮನ ಬಲಗೈ ಬಂಟನಾಗಿದ್ದ ಸಂಗೊಳ್ಳಿ ರಾಯಣ್ಣ ನಿಷ್ಠೆ ಪ್ರಾಮಾಣಿಕತೆಯಿಂದ ಕಿತ್ತೂರು ಸಂಸ್ಥಾನ ಉಳಿಸಲು ಪ್ರಯತ್ನಿಸುತ್ತಾನೆ. ಅಲ್ಲದೆ ಕರ್ನಾಟಕದಲ್ಲಿ ಸ್ವಾತಂತ್ರ್ಯದ ಮೊದಲ ಕಹಳೆಯನ್ನು ಈತನೇ ಊದುತ್ತಾನೆ. ಆದಕ್ಕಾಗಿ ಕಂಪನಿ ಸರ್ಕಾರ ರಾಯಣ್ಣನನ್ನು ಸೆರೆಹಿಡಿದು ಕೊಂದುಬಿಡುತ್ತಾರೆ. ಹೀಗೆ ನಾಡಿನ ಸ್ವಾತಂತ್ರ್ಯಕ್ಕಾಗಿ ತನ್ನನ್ನೇ ಬಲಿದಾನ ಗೈದ ಮಹಾವೀರ ಸಂಗೊಳ್ಳಿ ರಾಯಣ್ಣ.

**ಜೀವನಚರಿತ್ರೆಗಳ ವೈಶಿಷ್ಟ್ಯ ಮತ್ತು ಮಹತ್ವ**

ಮಲ್ಲಿಕಾ ಘಂಟಿ ಅವರು ಬರೆದಿರುವ 'ಅಹಲ್ಯಾಬಾಯಿ ಹೋಳ್ಕರ್', 'ಇಟಗಿ ಭೀಮವ್ವ', 'ವೀರ ಸಂಗೊಳ್ಳಿ ರಾಯಣ್ಣ' – ಈ ಮೂರು ಜೀವನ ಚರಿತ್ರೆಗಳ ವೈಶಿಷ್ಟ್ಯ ಮತ್ತು ಮಹತ್ವವನ್ನು ಕುರಿತು ಮಾತನಾಡುವುದಾದರೆ, ಒಂದು ಕಾಲಘಟ್ಟದಲ್ಲಿ ಬಹಳ ಪ್ರಚಲಿತವಾಗಿದ್ದ, ಅನೇಕ ಮನಸ್ಸುಗಳನ್ನು ಮುಟ್ಟಿದ್ದ, ಮಹಾನ್ ವ್ಯಕ್ತಿತ್ವಗಳನ್ನು ಅಪೂರ್ವವಾಗಿ ದಾಖಲಿಸುವ ಪ್ರಯತ್ನ ಇದಾಗಿದೆ. ಅಹಲ್ಯಾಬಾಯಿ ಹೋಳ್ಕರ್, ಇಟಗಿ ಭೀಮವ್ವ ಮತ್ತು ಸಂಗೊಳ್ಳಿ ರಾಯಣ್ಣ ಇವರುಗಳು ಇಂದಿನ ಜನತೆಯಲ್ಲಿ ಕಳೆದುಹೋಗುತ್ತಿರುವುದನ್ನು ಮರೆಯುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸಿ ಮಲ್ಲಿಕಾ ಘಂಟಿಯವರು ಈ ವ್ಯಕ್ತಿತ್ವಗಳು ಚರಿತ್ರೆಯಲ್ಲಿ ದಾಖಲಾಗುವಂತೆ ಮಾಡಿದ್ದಾರೆ. ಅಲ್ಲದೆ ಚರಿತ್ರೆಯಲ್ಲಿ ಈ ವ್ಯಕ್ತಿತ್ವಗಳು ಕಳೆದುಕೊಂಡಿರಬಹುದಾದ ಸಮಾನತೆಯ ಕೊಂಡಿಯ ಹುಡುಕಾಟ ಕೂಡ ಇಲ್ಲಿದೆ.

ಧಾರ್ಮಿಕ ಕ್ಷೇತ್ರದಲ್ಲಿ ಸದ್ದುಗದ್ದಲವಿಲ್ಲದೆ ಸಾಧನೆಗೈದ ಸಿದ್ಧಿಜೀವ ಭೀಮವ್ವಳಾದರೆ, ರಾಜ್ಯದ ಗದ್ದುಗೆ ಏರಿ ರಾಜಕೀಯ ರಂಗದಲ್ಲೊಂದು ಐತಿಹ್ಯವಾಗಿ ಉಳಿದ ಮಹಿಳೆ ಅಹಲ್ಯಾಬಾಯಿ ಹೋಳ್ಕರ್, ಕಿತ್ತೂರು ರಾಣಿ ಚೆನ್ನಮ್ಮನ ಬಲಗೈ ಭಂಟನಾಗುವ ಮೂಲಕ ಭಾರತ ಸ್ವಾತಂತ್ರ್ಯದ ಮೊದಲ ಕಹಳೆಯನ್ನು ಊದಿದವನು ಸಂಗೊಳ್ಳಿ ರಾಯಣ್ಣ. ಈ ಚಾರಿತ್ರಿಕ ವ್ಯಕ್ತಿಗಳನ್ನು ವ್ಯಕ್ತಿತ್ವಗಳನ್ನು ದಾಖಲಿಸುವ ಮತ್ತು ಇಂದಿನ ಜನತೆಗೆ ಪರಿಚಯಿಸುವ ಉದ್ದೇಶ ಈ ಕೃತಿಗಳಲ್ಲಿದೆ.

ಕಾಲ ಮತ್ತು ಅಕ್ಷರ ಚರಿತ್ರೆಯ ತಪ್ಪನ್ನು ಸರಿಪಡಿಸುತ್ತದೆ. ಸಮಾಜದಲ್ಲಿ ಹತ್ತಿಕ್ಕಲ್ಪಟ್ಟ ಸಮುದಾಯಗಳು ಬದುಕಿಗೆ ಸ್ಪಂದಿಸಿದ ರೀತಿಯನ್ನು ಚಾರಿತ್ರಿಕವಾಗಿ ದಾಖಲಾಗುವಂತೆ ಮಾಡುತ್ತದೆ. ಅಂತಹದ್ದೇ ಒಂದು ಮಹತ್ವ ಮತ್ತು ವೈಶಿಷ್ಟ್ಯ ಈ ಮೇಲಿನ ಜೀವನ ಚರಿತ್ರೆಗಳಿಗೆ ಇದೆ.

**ಜೀವನ ಚರಿತ್ರೆಗಳ ಕೇಂದ್ರ ಪ್ರಜ್ಞೆ**

ಈ ಸಮಾಜದಲ್ಲಿ ವೈದಿಕ, ವೈದಿಕೇತರರು ಎಂಬ ಕಲ್ಪನೆಯಿದೆ. ಅದರಲ್ಲಿ ವೈದಿಕೇತರ ಸಮುದಾಯಗಳ ಸಾಂಸ್ಕೃತಿಕ ಮತ್ತು ಐತಿಹಾಸಿಕ ಪರಂಪರೆಯಿದೆಯಲ್ಲ ಅದರಲ್ಲಿ ಬಂದಂತಹವರನ್ನೆಲ್ಲ ಚರಿತ್ರೆ ಸರಿಯಾಗಿ ದಾಖಲಿಸಲಿಲ್ಲ. ಇತ್ತೀಚಿನ ದಿನಗಳಲ್ಲಿ ಆಯಾ ಸಮುದಾಯಗಳನ್ನು ಇಟ್ಟುಕೊಂಡು ರಾಜಕೀಯ ಮಾಡುವಂತಹದ್ದು ನಡೆಯುತ್ತಿದೆ. ಅದು ನಿಜವಾದ ಅರ್ಥದೊಳಗೆ ಚರಿತ್ರೆಯನ್ನು ಪುನರ್ವಿಮರ್ಶೆಗೆ ಒಳಪಡಿಸುವುದಲ್ಲ. ಮುರಿದು ಕಟ್ಟುವುದಲ್ಲ ಅದು. ರಾಜಕೀಯ ಲಾಭಕ್ಕಾಗಿ ಮಾಡುತ್ತಿರುವಂತಹ ಒಂದು ಹುನ್ನಾರ. ಅದರ ಮಧ್ಯದಲ್ಲಿಯು ಈ ತಳಸಮುದಾಯಗಳು ವೈದಿಕೇತರ ಸಮುದಾಯಗಳು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಚರಿತ್ರೆಯಿಂದ ಗುರ್ತಿಸಿಕೊಳ್ಳಲು ಇಂತಹ ಜೀವನಚರಿತ್ರೆಯ ಅಧ್ಯಯನ ಮಾಡಬೇಕು. ಇಂತಹ ನಾಯಕರುಗಳ ಬಗ್ಗೆ ನಮ್ಮ ಮಕ್ಕಳಿಗೆ ಒಂದು ಸರಿಯಾದಂತಹ ಕಲ್ಪನೆಯಿರಬೇಕು; ಒಂದು ತಿಳುವಳಿಕೆ ಇರಬೇಕು. ಆ ಕಾರಣಕ್ಕಾಗಿ ಇವತ್ತು ನಾವು ಸಾಂಸ್ಕೃತಿಕ ನಾಯಕರುಗಳನ್ನು ಮರು ವಿಮರ್ಶೆಗೆ ಒಳಪಡಿಸುವ, ಮುರಿದು ಕಟ್ಟುವ, ಚರಿತ್ರೆಯಲ್ಲಿ ಸರಿಯಾದ ರೀತಿಯೊಳಗೆ ದಾಖಲಿಸುವ ಕೆಲಸವಾಗಬೇಕಾಗಿದೆ. ಅವರ ಶಕ್ತಿ ಸಾಮರ್ಥ್ಯ ಹಾಗೂ ಸಾಮಾಜಿಕ ಮಹತ್ವವನ್ನು ಇಂದಿನ ಜನತೆಗೆ ಪರಿಚಯಿಸಬೇಕಾಗಿದೆ.

**ಕೊನೆಟಿಪ್ಪಣಿಗಳು**


೧. ದಶಕದ ಕನ್ನಡ ಸಾಹಿತ್ಯ, ಸಂ.: ಎಚ್.ಟಿ.ಹಳ್ಳಕೇರಿ, ೨೦೦೨, ಪು. ೪೦

೨. ಅದೇ.,

೩. ಅಹಲ್ಯಾಬಾಯಿ ಹೋಳ್ಕರ್, ೧೯೯೪, ಪು. ೪೦

೪. ಅಹಲ್ಯಾಬಾಯಿ ಹೋಳಕರ, ದೇವಕಾಂತ ಚಂ.ಬಿಜ್ಜರಗಿ, ೨೦೦೮, ಪು. ೪

೫. ಅಹಲ್ಯಾಬಾಯಿ ಹೋಳ್ಕರ್, ೧೯೯೪, ಪು. ೨೩

ಅಧ್ಯಾಯ–೫

# ವಿಮರ್ಶೆ/ಸಂಪಾದನ ಬರಹಗಳು ಹಾಗೂ ಸಾಮಾಜಿಕ ಸಂಶೋಧನೆ ಕುರಿತ ಅಧ್ಯಯನ

ಕನ್ನಡ ಸಾಹಿತ್ಯವು ಹಲವು ಪ್ರಕಾರಗಳಿಂದ ಸಮೃದ್ಧವಾಗಿದೆ. ಅದು ವೈವಿಧ್ಯಮಯವಾಗಿದ್ದು, ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ. ಕನ್ನಡ ಸಾಹಿತ್ಯದ ಪ್ರಮುಖ ಪ್ರಕಾರಗಳೆಂದರೆ: ಕಾವ್ಯ, ಕತೆ, ಕಾದಂಬರಿ, ನಾಟಕ, ವಿಮರ್ಶೆ, ಸಂಶೋಧನೆ, ಸಂಪಾದನೆ ಇತ್ಯಾದಿ. ಹೀಗೆ ಕನ್ನಡ ಸಾಹಿತ್ಯವು ಬಹುಮುಖ ಆಯಾಯಗಳಲ್ಲಿ ರಚನೆಯಾಗುತ್ತಾ ಸಾಗಿದೆ.

ಈ ಸಾಹಿತ್ಯವನ್ನು ಎರಡು ಪ್ರಮುಖ ನೆಲೆಗಳಲ್ಲಿ ಗಮನಿಸಬಹುದು. ಮೊದಲನೆಯದು ಸೃಜನಶೀಲ ಸಾಹಿತ್ಯ, ಎರಡನೆಯದು ಸೃಜನೇತರ ಸಾಹಿತ್ಯ, ಸೃಜನಶೀಲ ಸಾಹಿತ್ಯದಲ್ಲಿ ಕಾವ್ಯ, ಕತೆ, ಕಾದಂಬರಿ, ನಾಟಕ ಪ್ರಕಾರಗಳು ಬಹಳ ಪ್ರಮುಖವಾಗಿ ಕಂಡುಬರುತ್ತವೆ. ವಿಮರ್ಶೆ, ಸಂಶೋಧನೆ, ಸಂಪಾದನೆ ಇವು ಸೃಜನೇತರ ಸಾಹಿತ್ಯ ಪ್ರಕಾರಗಳಾಗಿವೆ.

ಒಬ್ಬ ಕವಿಯ ಅಥವಾ ಲೇಖಕನ ನಿಜವಾದ ಪ್ರತಿಭೆ ಅವನ ಸೃಜನಶೀಲ ರಚನೆಯಲ್ಲಿ ಅಭಿವ್ಯಕ್ತಗೊಂಡಿರುತ್ತದೆ. ತಾನು ಈ ಸಮಾಜಕ್ಕೆ ತಿಳಿಸಬೇಕಾದ ಹಾಗೂ ತನ್ನ ಅನುಭವದ ಮೂಸೆಯಲ್ಲಿ ಬಂದ ಅನುಭವಗಳನ್ನು ಸೃಜನಶೀಲ ರಚನೆಯಲ್ಲಿ ಮೂರ್ತಿಕರಿಸಿಕೊಡುತ್ತಾನೆ. ತಾನು ಹೇಳಬೇಕಾದ ವಿಚಾರಗಳನ್ನು ಆತ ಸೃಜನಶೀಲ ಸಾಹಿತ್ಯದಲ್ಲಿ ತಿಳಿಸುತ್ತಾನೆ. ಸೃಜನಶೀಲತೆ ಎಂಬುದು ಒಂದು ವಿಶೇಷವಾದ ಪ್ರತಿಭೆಯಾಗಿದ್ದು ಇದು ಹೊಸಹೊಸ ಕ್ರಿಯಾಶೀಲತೆಯನ್ನು ಅಭಿವ್ಯಕ್ತಪಡಿಸು ವಂತಹದ್ದಾಗಿದೆ.

ಸಾಹಿತ್ಯ ಪ್ರಕಾರಗಳಲ್ಲಿ ಸೃಜನಶೀಲ ಸಾಹಿತ್ಯ ರಚನೆಯಷ್ಟೇ ಮಹತ್ವವನ್ನು ಸೃಜನೇತರ ಸಾಹಿತ್ಯವು ಪಡೆದುಕೊಂಡಿದೆ. ಸೃಜನೇತರ ಸಾಹಿತ್ಯ ರಚನೆಯು ಕನ್ನಡ ಸಾಹಿತ್ಯದಲ್ಲಿ ಬಹಳ ಸಮೃದ್ಧವಾಗಿಯೇ ಕಂಡುಬರುತ್ತದೆ. ಈ ಸಾಹಿತ್ಯವು ವಿಶ್ಲೇಷಣೆ, ವ್ಯಾಖ್ಯಾನವನ್ನು ಒಳಗೊಂಡಿರುತ್ತದೆ. ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಮಂದಿ ಸೃಜನಶೀಲ ಸಾಹಿತ್ಯ ಮತ್ತು ಸೃಜನೇತರ ಸಾಹಿತ್ಯ ರಚನೆಯಲ್ಲಿ ತೊಡಗಿದ್ದಾರೆ. ಅವುಗಳಲ್ಲಿ ವಿಮರ್ಶೆ, ಸಂಶೋಧನೆ ಹಾಗೂ ಸಂಪಾದನಾ ಬರಹಗಳನ್ನು ನೋಡಬಹುದು.

ವಿಮರ್ಶೆ, ಸಂಶೋಧನೆ, ಸಂಪಾದನೆ ಹೀಗೆ ವಿವಿಧ ಪ್ರಕಾರಗಳಲ್ಲಿ ಸಾಕಷ್ಟು ಮಹಿಳೆಯರು ತಮ್ಮದೇ ಆದ ಚಿಂತನಪರ ಮನಸ್ಸಿನಿಂದ ಸಾಹಿತ್ಯ ರಚನೆಯಲ್ಲಿ

ತೊಡಗಿಕೊಂಡಿದ್ದಾರೆ. ಹೀಗೆ ಸೃಜನೇತರ ಸಾಹಿತ್ಯ ರಚನೆಯಲ್ಲಿ ತೊಡಗಿರುವ ಮಹಿಳಾ ಚಿಂತಕಿಯರಲ್ಲಿ ಮಲ್ಲಿಕಾ ಘಂಟಿ ಅವರು ಒಬ್ಬರು.

ಮಲ್ಲಿಕಾ ಘಂಟಿಯವರು ಕಾವ್ಯ ನಾಟಕ, ವಿಮರ್ಶೆ, ಜೀವನಚರಿತ್ರೆ, ಸಂಶೋಧನೆ, ಸಂಪಾದನೆ ಹೀಗೆ ಬಹುಮುಖಿ ಆಯಾಮಗಳಲ್ಲಿ ಸಾಹಿತ್ಯ ಕೃಷಿ ಮಾಡಿದ್ದಾರೆ. ಅವರು ಈ ಹೊತ್ತಿನವರೆಗೆ 'ತನುಕರಗದವರಲ್ಲಿ', "ಧರಣಿಯ ಮೇಲೊಂದು", "ಒಳಗೆ ಸತ್ತು ಹೊರಗೆ" ಮೂರು ವಿಮರ್ಶಾ ಕೃತಿಗಳನ್ನು, 'ತನುವ ನೇಗಿಲ ಮಾಡಿ', 'ಕನ್ನಡ ಸಾಹಿತ್ಯ ಮತ್ತು ಮಹಿಳೆ' ಎಂಬ ಎರಡು ಸಂಪಾದಿತ ಕೃತಿಗಳನ್ನು 'ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ' ಎಂಬ ಸಂಶೋಧನಾ ಕೃತಿಯನ್ನು ಪ್ರಕಟಿಸಿದ್ದಾರೆ.

**ವಿಮರ್ಶೆ:** ವಿಮರ್ಶೆ ಸಾಹಿತ್ಯದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇದು ಪಾಶ್ಚಾತ್ಯ ದೇಶಗಳಿಂದ ಇಲ್ಲಿಗೆ ಬಂದದ್ದಾಗಿದ್ದು ಹೊಸ ಹೊಸ ಹೊಳಹುಗಳನ್ನು ಬಿಡಿಸಿ ತಿಳಿಸುತ್ತದೆ. ವ್ಯಾಖ್ಯಾನ–ವಿಶ್ಲೇಷಣೆ–ವಿಮರ್ಶೆಯ ಮೂಲಕ ಲೇಖಕ ತನ್ನ ಕೃತಿಯಲ್ಲಿ ಹೇಳಲಾಗದ್ದನ್ನು ಹೇಳುತ್ತಾನೆ. ಇದು ಕೃತಿಯ ಮೌಲ್ಯಮಾಪನದಲ್ಲಿ ತೊಡಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ವಿಮರ್ಶಾ ಕೃತಿಗಳು ಹೊರ ಬಂದಿವೆ. ಇಂದು ಸೃಜನಶೀಲ ಕೃತಿ ರಚನೆ ಮತ್ತು ವಿಮರ್ಶೆ ಎರಡೂ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿರುವ ಲೇಖಕಿಯರಲ್ಲಿ ಮಲ್ಲಿಕಾ ಘಂಟಿಯವರೂ ಒಬ್ಬರಾಗಿದ್ದಾರೆ. ಆ ಮೂಲಕ ಅದ್ಭುತವಾದ ಸಮಾಜ ವಿಕಾಸದ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

'ತನು ಕರಗದವರಲ್ಲಿ' ಅವರು ಮೊದಲ ವಿಮರ್ಶಾ ಕೃತಿಯಾಗಿದೆ. ಇದು ಪ್ರಖರವಾದ ವೈಚಾರಿಕ ಚಿಂತನೆಯನ್ನೊಳಗೊಂಡ ಕೃತಿಯಾಗಿದ್ದು, ಅನೇಕ ಚರ್ಚೆಗಳಿಗೆ ಗ್ರಾಸವನ್ನು ಒದಗಿಸಿದೆ. ಅನೇಕ ಐತಿಹಾಸಿಕ ವಿಚಾರಗಳನ್ನು ಸಮಕಾಲೀನ ಸಂದರ್ಭಕ್ಕೆ ಹೋಲಿಕೆ ಮಾಡಿ ಹೇಳುವ ಮೂಲಕ ಸತ್ಯ ಸಂಗತಿಗಳನ್ನು ತೆರೆದಿಡುತ್ತದೆ. ಈ ಕೃತಿಯು ೧೮ ವಿಮರ್ಶಾ ಲೇಖನಗಳನ್ನು ಒಳಗೊಂಡಿದೆ. ಇಲ್ಲಿನ ಲೇಖನಗಳನ್ನ ೨ ನೆಲೆಯಲ್ಲಿ ನೋಡಬಹುದು. ಮೊದಲನೆಯದು ವಚನಸಾಹಿತ್ಯದ ಹಿನ್ನೆಲೆ, ಮತ್ತೊಂದು ಸಮಕಾಲೀನ ಸಂದರ್ಭ.

ವಚನ ಸಾಹಿತ್ಯದ ಹಿನ್ನೆಲೆಯನ್ನು ಇರಿಸಿಕೊಂಡು ಭಕ್ತಿ ಪಂಥದ ಮಹಿಳೆ ಮತ್ತು ನಗ್ನತೆ, ವಚನಕಾರ್ತಿಯರ ಧಾರ್ಮಿಕ ಆಚರಣೆಗಳು, ವಚನಕಾರ್ತಿಯರು ಮತ್ತು ಜಾತಿ ವಿನಾಶ, ಸಿದ್ಧರಾಮ ಮತ್ತು ಕೆಳವರ್ಗದ ವಚನಕಾರರ ಸ್ತ್ರೀಪರ ನಿಲುವುಗಳು, ವಚನಗಳಲ್ಲಿ ಸ್ತ್ರೀಪರ ಧೋರಣೆ ಈ ಶೀರ್ಷಿಕೆಯನ್ನು ಹೊತ್ತಿರುವ ಲೇಖನಗಳನ್ನು ನೋಡಬಹುದು.

ಕುವೆಂಪು ಕೃತಿಗಳಲ್ಲಿ ಮಹಿಳಾ ಸಂವೇದನೆಗಳು, ಮಹಿಳಾ ವಿಮೋಚನೆ ಹಾಗೂ ಸಮಾನತೆಗಾಗಿ ಹೋರಾಟ, ದಲಿತ ಬಂಡಾಯ ಸಾಹಿತ್ಯದಲ್ಲಿ ಬದಲಾವಣೆ ಆಶಯ ಮತ್ತು ಸ್ತ್ರೀ, ಪ್ರಗತಿಶೀಲ ಕಥೆ ಕಾದಂಬರಿಗಳಲ್ಲಿ ಸ್ತ್ರೀವಾದಿ ಪ್ರಜ್ಞೆ, ಮಹಿಳಾ ವಿಮೋಚನಾ ಚಳವಳಿ ಮತ್ತು ಬಂಡಾಯ ಸಾಹಿತ್ಯ, ಕನ್ನಡ ರಂಗಭೂಮಿ ಮತ್ತು ಮಹಿಳೆ, ಮಹಿಳೆ ಮತ್ತು ಸಾಂಸ್ಕೃತಿಕ ಬಿಕ್ಕಟ್ಟುಗಳು, ಬಂಡಾಯದ ಪ್ರಾತಿನಿಧಿಕ ಮಹಿಳೆ, ಹಾಲುಮತದ ಮಹಿಳೆಯರ ಸಾಧನೆ – ಈ ಲೇಖನಗಳನ್ನು ಅವರು ಸಮಕಾಲೀನ ಸಂದರ್ಭಕ್ಕೆ ಅನ್ವಯವಾಗುವಂತೆ ಬರೆದಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯ ನಡುವೆ ಇರುವ ಮಹಿಳೆ ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಬದುಕಿನ ಪಯಣದಲ್ಲಿ ಸಾಗಿದ ಯಾನವನ್ನು ಇಲ್ಲಿನ ಲೇಖನಗಳು ಪ್ರತಿಧ್ವನಿಸುತ್ತವೆ. ಇಲ್ಲಿನ ಲೇಖನಗಳಲ್ಲಿ ಬಗೆಬಗೆಯ ಪ್ರಗತಿಶೀಲ ಧೋರಣೆಯನ್ನು ಕಾಣಬಹುದು. ಹೋರಾಟಗಾರರ ಹಾದಿಯನ್ನು ಗಮನಿಸಬಹುದು. ಇಲ್ಲಿನ ಲೇಖನಗಳ ಗುರಿ ಸಮಾಜ ವಿಮೋಚನೆ, ವಚನ ಸಾಹಿತ್ಯದ ಹಿನ್ನಲೆಯ ಲೇಖನಗಳು ೧೨ನೇ ಶತಮಾನದ ವಿಚಾರಗಳನ್ನೇ ಒಳಗೊಂಡಿದ್ದರೂ, ಅವು ಸಮಕಾಲೀನ ಸಂದರ್ಭಕ್ಕೆ ನೆರವಾಗುವಂತೆ ರಚಿತವಾಗಿವೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಲೇಖನಗಳು ಈ ಹೊತ್ತಿನ ಸಂದರ್ಭಕ್ಕೆ ಅನ್ವಯವಾಗಿ ಸಮಾಜದ ವಿಕಾಸಕ್ಕೆ ಪೂರಕವಾಗಿ ದುಡಿಯುತ್ತವೆ.

'ಭಕ್ತಿ ಪಂಥದ ಮಹಿಳೆ ಮತ್ತು ನಗ್ನತೆ' ಮತ್ತು 'ವಚನಕಾರ್ತಿಯರ ಧಾರ್ಮಿಕ ಆಚರಣೆಗಳು' ಈ ಲೇಖನಗಳು ಭಕ್ತಿ ಪಂಥದ ಮಾರ್ಗದಲ್ಲಿ ಸಾಗಿವೆ. ಬೌದ್ಧರು, ಜೈನರು, ವೈಧಿಕ ಧರ್ಮದ ಬ್ರಾಹ್ಮಣ್ಯದ ಶ್ರೇಷ್ಠತೆಯನ್ನು ಕರ್ಮಠತನವನ್ನು ಕಟುವಾಗಿ ವಿರೋಧಿಸಿದವರು. ಮಹಿಳೆಯರಿಗೆ ಧಾರ್ಮಿಕವಾಗಿ ಮೋಕ್ಷದ ಬಾಗಿಲನ್ನು ತೆರೆದವರು ಜೈನ ಶ್ವೇತಾಂಬರರು. ಸ್ತ್ರೀಯರು ಸನ್ಯಾಸಿನಿ(ಕಂತಿ)ಯರಾಗಿ ಧರ್ಮ ಪ್ರಚಾರಕರಾಗುವ ಅವಕಾಶ ಅಲ್ಲಿತ್ತು. ಹೀಗೆ ಎಲ್ಲ ಧರ್ಮಗಳಿಗಿಂತಲೂ ಸಾಮಾಜಿಕ ಬದಲಾವಣೆಯ ಆಶಯವನ್ನು ಪ್ರಖರವಾಗಿಟ್ಟುಕೊಂಡು ಬಂದ ಜೈನಧರ್ಮ ಶ್ರೇಷ್ಠವಾದುದು. ಅದು ಮಹಿಳೆಯರಿಗೆ, ಸಾಮಾಜಿಕ, ಧಾರ್ಮಿಕ ಲೋಕದ ನೂತನ ಬಾಗಿಲನ್ನು ತೆರೆದು ಆ ಮೂಲಕ ಮಹಿಳೆ ಮುನ್ನುಗ್ಗಲು ಸಾಮೂಹಿಕ ಅವಕಾಶವನ್ನು ಕಲ್ಪಿಸಿದ್ದನ್ನು ಇಲ್ಲಿ ಧರ್ಮದ ಹಿನ್ನಲೆಯಲ್ಲಿರಿಸಿ ನೋಡಿದ್ದಾರೆ.

"ಸ್ವತಂತ್ರ ವಿಚಾರಗಳನ್ನು, ಭಾವನೆಗಳನ್ನು ಹೆಣ್ಣಾದವಳು ಹೊರಹಾಕುವುದೇ ಅಪರಾಧವೆಂದ ಸಮಾಜದಲ್ಲಿ ಭಾವವಿರೇಚನೆಗೆ ಮಹಿಳೆಯರು ಕಂಡುಕೊಂಡ ಹಾದಿ ಅತ್ಯಂತ ದುರ್ಗಮವಾದುದು. ಒಂದು ಹುಚ್ಚು, ಇನ್ನೊಂದು ನಗ್ನತೆ. ಮತ್ತೊಂದು

ಕುರೂಪಧಾರಣೆ ಸ್ವಯಂ ದೇಹದಂಡನೆಗೆ ಒಳಗಾಗುವುದು. ಈ ಅಸ್ತ್ರಗಳ ಮೂಲಕ ಭಕ್ತಿ ಪಂಥದ ಮಹಿಳೆಯರು ಸಾಮಾಜಿಕ ಧಾರ್ಮಿಕ ರಂಗದಲ್ಲಿ ಹೋರಾಡಿದ ಇತಿಹಾಸವನ್ನು ಇಂದು ಅವಲೋಕಿಸಬೇಕಾಗಿದೆ. ಹುಚ್ಚು ಎಂದು ಕರೆಯಿಸಿಕೊಂಡ ಸ್ವಭಾವ ಮತ್ತು ನಗ್ನತೆ, ಕುರೂಪವನ್ನು ಸ್ವಯಂ ಪಡೆದುಕೊಂಡ ಸಾಧಕಿಯರ ಕ್ಲಿಷ್ಟ ಸ್ಥಿತಿಯು ಅರ್ಥವಾಗದಿದ್ದರೆ ನಮಗೆ ಅಕ್ಕಮಹಾದೇವಿಯ ನಗ್ನತೆಯಾಗಲಿ ಮೀರಾಳ ಮೌನವಾಗಲಿ, ಕಾರಿಕಾಲಮ್ಮೆಯ ಕುರೂಪವಾಗಲಿ ಅರ್ಥವಾಗುವುದಿಲ್ಲ".[೧]

'ವಚನಕಾರ್ತಿಯರು ಮತ್ತು ಜಾತಿ ವಿನಾಶ' ಲೇಖನ ಅತ್ಯಂತ ಕುತೂಹಲವನ್ನುಂಟು ಮಾಡುವ ಲೇಖನ. "ವೈದಿಕ ಧರ್ಮ ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿರುವ ಜಾತಿ, ಕುಲ, ನೆಲೆ, ಆಚಾರ, ವಿಚಾರಗಳನ್ನೆಲ್ಲಾ ಕಾಪಿಟ್ಟುಕೊಂಡು ಬರುವವರಲ್ಲಿ ಮಹಿಳೆಯರು ಹೆಚ್ಚು ಕಾಳಜಿ ವಹಿಸುತ್ತಾರೆ."[೨] ಎಂಬ ಲೇಖಕಿಯ ಮಾತು ಅಕ್ಷರಶಃ ಸತ್ಯ. ಇದು ಹೆಣ್ಣನ್ನು ಕತ್ತಲೆಯಲ್ಲಿಟ್ಟ ಗಂಡಿನ ಶೋಷಣೆಯ ಮತ್ತೊಂದು ಮುಖ. ಇದನ್ನು ಖಚಿತಪಡಿಸಿದವರು ವಚನಕಾರರು.

ಅಕ್ಕಮಹಾದೇವಿ, ಅಮುಗೆರಾಯಮ್ಮ, ಕಾಳವ್ವ ಮೊದಲಾದವರು ಜಾತಿ, ವರ್ಗವನ್ನು ಮೀರಿ ವೈಚಾರಿಕ ನೆಲೆಯಲ್ಲಿ ಅವರ ಅನುಭವವನ್ನು ಸಾಧಿಸಿದ್ದು ಸಾರ್ವಕಾಲಿಕ ಸತ್ಯ ಸಂಗತಿ. ದುಡಿವ ಮಹಿಳೆ ಇತರರಿಗಿಂತ ಹೇಗೆ ಭಿನ್ನವಾಗಿ ಸ್ವಾತಂತ್ರ್ಯವನ್ನು ಪರಿಭಾವಿಸುತ್ತಾಳೆ ಎಂಬುದನ್ನು ಆಧುನಿಕ ಮಹಿಳೆಯ ಸಾಧನೆ, ಸಾಧ್ಯತೆಗಳ ಅರಿವಿನ ಹಿನ್ನಲೆಯಲ್ಲಿ ಗಮನಿಸಬಹುದು.

ಕುವೆಂಪು ಕೃತಿಗಳಲ್ಲಿ ಮಹಿಳಾ ಸಂವೇದನೆ, ಮಹಿಳಾ ವಿಮೋಚನೆ, ದಲಿತ ಬಂಡಾಯ ಸಾಹಿತ್ಯದಲ್ಲಿ ಬದಲಾವಣೆ ಆಶಯ ಮತ್ತು ಸ್ತ್ರೀ, ಪ್ರಗತಿಶೀಲರಲ್ಲಿ ಸ್ತ್ರೀವಾದಿ ಪ್ರಜ್ಞೆ ಇವುಗಳು ಸಮಕಾಲೀನತೆಗೆ ಸ್ಪಂದಿಸುವಂತಿವೆ. ಈ ಲೇಖನಗಳಲ್ಲಿ ಸಾಹಿತ್ಯದ ಅನನ್ಯತೆ ಮಹಿಳೆ ಕಾರಣಕ್ಕೆ ಹೇಗೆ ಭಿನ್ನವಾಗಿದೆ ಎಂಬುದರ ಪರಿಶೀಲನೆಯ ಒಳನೋಟವಿರುವುದನ್ನು ಗಮನಿಸಬಹುದು.

'ಕನ್ನಡ ರಂಗಭೂಮಿ ಮತ್ತು ಮಹಿಳೆ' ಲೇಖನವು ರಂಗಭೂಮಿಯನ್ನು ಕುರಿತು ಮಹಿಳೆಯ ಪಾಲ್ಗೊಳ್ಳುವಿಕೆಯನ್ನು ಅದರ ಮಿತಿ ಮತ್ತು ವ್ಯಾಪ್ತಿ ಹಾಗೂ ಅಪಾಯಗಳನ್ನು ಕುರಿತು ಹಲವು ಸೂಕ್ಷ್ಮ ಸಂಗತಿಗಳನ್ನು ಓದುಗರ ಮುಂದೆ ತೆರೆದಿಡುತ್ತದೆ. ಇಡೀ ನಾಟಕ ಪರಂಪರೆಯಲ್ಲಿ ಮಹಿಳೆ ಮತ್ತು ಆಕೆಯ ಪಾಲ್ಗೊಳ್ಳುವಿಕೆಯನ್ನು ವಿಶ್ಲೇಷಿಸಿದ್ದಾರೆ. ಇದೊಂದು ಕಲೆ ಎಂದು ಗೌರವದಿಂದ ಬದುಕಿ ಮಾನ್ಯರಾಗಿರುವವರ ಬಗೆಗಿನ ದಾಖಲೆಯೂ

ಈ ಲೇಖನದ ಶಕ್ತಿಯನ್ನು ಹೆಚ್ಚಿಸಿದೆ ಜೊತೆಗೆ ಇಂದಿನ ಸಿನಿಮಾ ಜಗತ್ತಿನ ಸೂಕ್ಷ್ಮ ಸಂಗತಿಗಳನ್ನು ಕುರಿತು ಚಿಂತಿಸಿರುವುದು ವಿಶೇಷ.

ಹೀಗೆ ಸಾರ್ವಜನಿಕ ಸಂಗತಿಗಳೊಂದಿಗೆ ವಾಸ್ತವ ಪ್ರಜ್ಞೆಯನ್ನು ಇರಿಸಿಕೊಂಡು ಅಕ್ಷರವಿದ್ಯೆ, ಪುಸ್ತಕ ಹಾಗೂ ಮಹಿಳೆ, ಮಹಿಳೆಯ ಸಾಂಸ್ಕೃತಿಕ ಬಿಕ್ಕಟ್ಟುಗಳು ಈ ಲೇಖನಗಳು ಭವಿಷ್ಯತ್ತನ್ನು ಕುರಿತು ಚಿಂತನೆಗೆ ಪ್ರಯತ್ನಿಸುತ್ತವೆ.

'ತನು ಕರಗದವರಲ್ಲಿ' ಸಂಕಲನವನ್ನು ಕುರಿತು ಕೆ.ವಿ.ನಾರಾಯಣ ಅವರು ತಮ್ಮ ಅಭಿಪ್ರಾಯವನ್ನು ಹೀಗೆ ತಿಳಿಸುತ್ತಾರೆ: "ಚಾರಿತ್ರಿಕ ಗತಿಯಲ್ಲಿ ಮತ್ತು ಸಮಕಾಲೀನ ಸಂದರ್ಭದಲ್ಲಿ ಮಹಿಳೆಯನ್ನು ಇರಿಸಿ ನೋಡುವುದು, ಕಂಡುಕೊಳ್ಳುವುದು ಇಲ್ಲಿಯ ಎಲ್ಲಾ ಲೇಖನಗಳ ಆಶಯ. ಲಿಂಗಾಧಾರಿತ ತಾರತಮ್ಯಗಳು ಬಯಲುಗೊಳ್ಳುವಲ್ಲಿ ಪ್ರಜ್ಞಾಸ್ತರಗಳು ಕೆಲಸ ಮಾಡಿರುವ ವಿಧಾನವನ್ನು ಇಲ್ಲಿ ತೆರೆದಿಡಲು ಯತ್ನಿಸಲಾಗಿದೆ. ಎರಡು ಚಾರಿತ್ರಿಕ ಸಂಗತಿಗಳನ್ನು, ಸಂದರ್ಭಗಳನ್ನು ಮುಕ್ತವಾಗಿ ಚರ್ಚೆಗೆ ಗುರಿಪಡಿಸುವುದನ್ನು ಇಲ್ಲಿ ಕಾಣುತ್ತೇವೆ."[೩] ಎಂದು ಕೃತಿಯ ಗಂಭೀರ ದರ್ಶನವನ್ನು ಅವರು ತೆರೆದಿಡುತ್ತಾರೆ.

**ಧರಣಿಯ ಮೇಲೊಂದು**

ಮಲ್ಲಿಕಾ ಘಂಟಿಯವರ ಎರಡನೆಯ ಸಂಕಲನ 'ಧರಣಿಯ ಮೇಲೊಂದು'–೨೩ ಲೇಖನಗಳನ್ನು ಒಳಗೊಂಡದ್ದಾಗಿದೆ. 'ಪಂಪ ಮತ್ತು ಸಾಮಾಜಿಕ ನ್ಯಾಯ' ಎಂಬ ಮೊದಲ ಲೇಖನದಿಂದ ಆರಂಭಗೊಂಡು ವಚನ, ಕೀರ್ತನೆ, 'ಕುವೆಂಪು ಸಾಹಿತ್ಯದಲ್ಲಿ ಬಂಡಾಯ ಮತ್ತು ಶೂದ್ರ ಪ್ರಜ್ಞೆ', ಕಟ್ಟೀಮನಿ ಅವರ ಕಾವ್ಯ 'ಜೋಕುಮಾರಸ್ವಾಮಿ', ದಲಿತ ಬಂಡಾಯ ಸಾಹಿತ್ಯ, 'ಭೂಮಿ ತೂಕದ ತಕ್ಕಡಿಯಲ್ಲಿ ಬೆವರಿನ ಬೆಲೆಯ ಹಂಬಲ' ಎಂಬೆಲ್ಲಾ ಸಾಹಿತ್ಯಕ ಅಂಶಗಳನ್ನು ತಿಳಿಸುತ್ತಾ ಲಂಕೇಶ್, ಬರಗೂರು, ಕಾ.ತ.ಚಿಕ್ಕಣ್ಣ, ಲಕ್ಕಪ್ಪಗೌಡ ಮೊದಲಾದ ಸಮಕಾಲೀನ ಬರಹಗಾರರ ಮೇಲೆಯೂ ಬೆಳಕು ಚೆಲ್ಲಿ ಅದೇ ಸಂದರ್ಭದಲ್ಲಿ ವರ್ತಮಾನದ ಸಂಗತಿಗಳಾದ ಮತಾಂತರ, ಪುರೋಹಿತಶಾಹಿ, ಗುರುಪೀಠಗಳ ಕೋಮುಗಲಭೆಯಂತಹ ಹಸಿಬಿಸಿ ಸಂಗತಿಗಳನ್ನು ಕುರಿತು ಚಿಂತನೆಗೈಯ್ಯುತ್ತಾರೆ.

ಇಲ್ಲಿಯ ಲೇಖನಗಳು ವಚನಕಾರರ ಬಗ್ಗೆ, ದಾಸಸಾಹಿತ್ಯದ ಬಗ್ಗೆ, ಕನಕನ ಬಗ್ಗೆ ಮತ್ತು ಪಂಪನ ಬಗ್ಗೆ ವಿವೇಕಪೂರ್ಣವಾಗಿ ಚಿಂತಿಸುತ್ತಾ, ಒಂದು ಏಕಸೂತ್ರವಾಗಿರುವ ವಾದವನ್ನು ಮಂಡಿಸುತ್ತಾರೆ. ಅದೇನೆಂದರೆ: ಇಲ್ಲಿಯ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಪರಂಪರೆಗಳು ಹೇಗೆ ವರ್ಣ, ಜಾತಿ, ಲಿಂಗ ಹಾಗೂ ವರ್ಗಗಳ ಅಸಮಾನತೆಗಳನ್ನು ಪ್ರತಿರೋಧಿಸಿಕೊಂಡು ಬಂದಿವೆ. ಹೇಗೆ ಹಿಂದಿನ ಕಾಲದ ಕೃತಿಗಳು ಬಹುಪಾಲು

ಅಸಮಾನತೆಗಳ ವಿರುದ್ಧ ಹೋರಾಟವನ್ನು ಆಂತರ್ಯದಲ್ಲಿ ಹೊಂದಿವೆ. ಅವುಗಳ ಸಮಕಾಲೀನ ವಿಶ್ಲೇಷಣೆ ಇಲ್ಲಿನ ಲೇಖನಗಳ ಒಳತಿರುಳು.

ಪಂಪನು ಎದುರಿಸಿದ ಬಿಕ್ಕಟ್ಟುಗಳು–ದ್ವಂದ್ವಗಳು ಹಲವು. ಅವುಗಳ ನಡುವೆಯೂ ಆತನಲ್ಲಿದ್ದ ಸಾಮಾಜಿಕ ನ್ಯಾಯದ ಕಳಕಳಿಯನ್ನು ಲೇಖಕರು ವಿಶ್ಲೇಷಿಸುತ್ತಾರೆ. ಆ ಮೂಲಕ ಕನ್ನಡ ಸಾಹಿತ್ಯದ ಪ್ರಾರಂಭಕಾಲದ ತುಡಿತಗಳು ದಾಖಲಾದದ್ದನ್ನು ಕಂಡುಕೊಂಡು ಮುಂದೆ ಪರಂಪರೆ ವಿಸ್ತೃತಗೊಂಡದ್ದರ ಬಗ್ಗೆ ತಿಳಿಸುತ್ತಾರೆ. ವಚನ ಸಾಹಿತ್ಯವನ್ನು ಬಂಡಾಯ ಸಾಹಿತ್ಯದೊಂದಿಗೆ ಮುಖಾಮುಖಿ ಮಾಡಿಸುವ ಮೂಲಕ ಕನಕದಾಸರ ಕೀರ್ತನೆಯಲ್ಲಿಯ ತಲ್ಲಣಗಳನ್ನು ಬಹುಮುಖಿ ನೆಲೆಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಲೇಖಕರು ಕೇವಲ ವಿವರ ವಿಶ್ಲೇಷಣೆಯ ಮಿತಿಯಲ್ಲಷ್ಟೇ ನಿಲ್ಲದೆ ಅಲ್ಲಿ ಸಾಧ್ಯವಾಗಬೇಕಿರುವ ಫಲಿತಗಳ ಬಗೆಗೂ ಗಂಭೀರವಾಗಿ ಯೋಚಿಸುವುದು ಮನುಷ್ಯ ಲೋಕದ, ಮತ್ತಷ್ಟು ಸುಂದರಗೊಳ್ಳುವ ಜೀವನದ ಬಗೆಗಿನ ಕಳಕಳಿಗೂ ಆಗುತ್ತದೆ.

ಕೆಲವೊಂದು ಲೇಖನಗಳನ್ನು ಹೊರತುಪಡಿಸಿ ಉಳಿದ ಲೇಖನಗಳು ಆಧುನಿಕ ಸಾಹಿತ್ಯದೊಂದಿಗೆ ಪ್ರಧಾನವಾಗಿ ಅನುಸಂಧಾನ ನಡೆಸಿವೆ. ಆರಂಭಕ್ಕೆ ಕುವೆಂಪು ಸಾಹಿತ್ಯದಲ್ಲಿ ಬಂಡಾಯ ಮತ್ತು ಶೂದ್ರ ಪ್ರಜ್ಞೆಯನ್ನು ಗುರುತಿಸುವ ಲೇಖಕರು ಕಟ್ಟೀಮನಿಯವರ ಕಾವ್ಯದ ನೆಲೆಗಳನ್ನು ಪರಿಚಯಿಸುತ್ತಾರೆ. ಬರಗೂರರ ಕತೆಗಳಲ್ಲಿರುವ ಜನಪರತೆ, ಅದರ ಸಹಜ ಸಾಧ್ಯತೆ, ಅದನ್ನು ಬರಗೂರು ಇತರರಿಗಿಂತ ಹೆಚ್ಚು ಸ್ಪಷ್ಟವಾಗಿ ಮಂಡಿಸುವ ಪರಿ, ಅದರ ಬದ್ಧತೆಗಿರುವ ಸಾಚಾತನಗಳೆಲ್ಲವೂ ನೇರವಾದ ಉದಾಹರಣೆಗಳೊಂದಿಗೆ ವಿಶ್ಲೇಷಿಸಲ್ಪಡುವುದು ಇಂತದ್ದೇ ಕಾರಣಗಳಿಂದ ಎನ್ನಬಹುದು.

ಈ ಶತಮಾನದ ಕನ್ನಡ ಸಾಹಿತ್ಯ ಸ್ವರೂಪ ಅದರ ಸಂಕೀರ್ಣತೆಯಂತಹ ತಾತ್ವಿಕ ವಿಷಯವನ್ನು ಪ್ರಾತಿನಿಧಿಕ ನೆಲೆಯಲ್ಲಿ ಗಂಭೀರವಾಗಿ ದರ್ಶಿಸುವ ಲೇಖಕರು ಸಮಾಜ, ರಾಜಕೀಯ, ಭಾಷಾನೀತಿ, ಸಾಂಸ್ಕೃತಿಕ ಸಂಘರ್ಷ, ಸಾಮಾಜಿಕ ಸಮಸ್ಯೆಗಳು, ಸ್ವಾತಂತ್ರ್ಯ ಚಳವಳಿ, ಆಶಾವಾದ, ಆದರ್ಶ, ನಿರಾಸೆ, ಆಕ್ರೋಶದಂತಹ ವಿಷಯಗಳನ್ನು ಸಮೀಕ್ಷಿಸುವ ಮೂಲಕ ಅದರ ಅರೆ–ಕೊರೆಗಳನ್ನು ಗುರುತಿಸುತ್ತಾರೆ.

ಕಣ್ಣು, ಕಿವಿ, ನೆನಪುಗಳನ್ನು ಉಳ್ಳ ಯಾವುದೇ ಚೇತನ ಬಹುರೂಪಿ ತಲ್ಲಣಗಳನ್ನು ಅನುಭವಿಸುತ್ತದೆ. ನಮ್ಮ ಸಾಮಾಜಿಕ ಸಂದರ್ಭದಲ್ಲಿ ವಿವೇಕಪೂರ್ಣ ನಡೆಯೊಂದಿಗೆ ಈ ನೆಲದ ಜೀವಪರ ಕಾಳಜಿಯ ಸಂವೇದನಾಶೀಲತೆಯನ್ನು ಪ್ರಕಟಿಸುತ್ತದೆ. ಕಾಲದುದ್ದಕ್ಕೂ ಕಾಡುವ ಪುರೋಹಿತಶಾಹಿ, ಅದು ಶೂದ್ರ ಬೌದ್ಧಿಕತೆಯ ಮೇಲೆ ನಡೆಸುವ ಸಾಂಸ್ಕೃತಿಕ ಧಾಳಿ, ಒಳಸಂಚು ಇತ್ಯಾದಿಗಳನ್ನು ಪ್ರತಿರೋಧದ ನೆಲೆಯಲ್ಲಿಯೇ ವಿಮರ್ಶಿಸುತ್ತದೆ.

ಹಾಗೆಯೇ ಧರ್ಮದ ಹೆಸರಿನಲ್ಲಿ ಶ್ರೀ ಸಾಮಾನ್ಯರಿಗೆ ನೆಮ್ಮದಿಯೂ ಆಗಬೇಕಾಗಿದ್ದ ಗುರುಪೀಠಗಳು ಜಾತಿಯಂತಹ ಸಂಕುಚಿತ ಭಾವಗಳಿಗೆ ಸಾಧನವಾಗುತ್ತಿರುವ ದುರಂತವನ್ನು ಕುರಿತ ಇಲ್ಲಿ ಲೇಖನಗಳಿವೆ.

**ಒಳಗೆ ಸತ್ತು ಹೊರಗೆ:** 'ಒಳಗೆ ಸತ್ತು ಹೊರಗೆ' ಮಲ್ಲಿಕಾ ಘಂಟಿಯವರ ಮೂರನೇ ವಿಮರ್ಶಾ ಸಂಕಲನ. ಇಲ್ಲಿನ ಲೇಖನಗಳು ವಚನಸಾಹಿತ್ಯ ಮತ್ತು ಶರಣ ಚಳವಳಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಇದರಲ್ಲಿ ಬಹುಪಾಲು ಲೇಖನಗಳು ಮಹಿಳೆಯರನ್ನು ಕೇಂದ್ರವಾಗಿಟ್ಟುಕೊಂಡು ಬರೆದವು. ಹೆಣ್ಣಿಗೆ ಸ್ವಾತಂತ್ರ್ಯ, ಸಮಾನತೆ, ದೊರಕಿದ್ದು ಶರಣ ಚಳವಳಿಯ ಕಾಲದಲ್ಲಿ ಎನ್ನುವ ಲೇಖಕರ ನಂಬಿಕೆ, ಅರಿವುಗಳನ್ನು ಈ ಕೃತಿಯ ಹಿನ್ನೆಲೆಯಲ್ಲಿರುವುದನ್ನು ಕಾಣಬಹುದು.

ಧರ್ಮಗಳ ಹಿನ್ನೆಲೆಯನ್ನು ಪ್ರಾಸ್ತಾವಿಕವಾಗಿ ಗಮನಿಸುವ 'ಬಸವತತ್ತ್ವ ಮತ್ತು ಮಹಿಳೆ' ಲೇಖನವು ಶರಣರು, ಹೆಣ್ಣನ್ನು ನಿರ್ವಚಿಸಿದ ಬಗೆಯನ್ನು, ಕೆಲವು ದ್ವಂದ್ವಗಳನ್ನು ವಿಶ್ಲೇಷಿಸುತ್ತಲೇ 'ಅನುಭವ ಮಂಟಪ' ಹೆಣ್ಣಿನ ವಿಚಾರದಲ್ಲಿ ತಾಳಿದ ನಿಲುವನ್ನು ಗೌರವಿಸುವ ನಿಟ್ಟಿನಲ್ಲಿ ಚಿಂತಿಸಿದ ಕ್ರಮವನ್ನು ಕಾಣಬಹುದು. ಇಂತಹ ಚಳವಳಿಯ ಒಳಗೂ ಅಕ್ಕ ಎದುರಿಸಿದ ಸವಾಲುಗಳು ಸರಳವಾಗಿರಲಿಲ್ಲ. ಇಡೀ ಜಗತ್ತಿನ ಇರಿಹಾಸದಲ್ಲೇ ಮೊದಲ ಬಾರಿಗೆ ಈ ರೀತಿಯ ನಿರ್ಲಿಪ್ತತೆ, ನಗ್ನತೆಯಿಂದ ಹೊರಟ ಅಕ್ಕನ ನಿಲುವು ಸಾಮಾನ್ಯತೆಗೆ ನಿಲುಕುವಂತಹುದಲ್ಲ ಅಂತಹ ಯಾತನಾಮಯ ಬದುಕಿನಲ್ಲಿ ಅಕ್ಕ ಎಂಬ ಲೇಖನ ಒಂದಿಷ್ಟು ಆತಂಕ ಭಾವಗಳನ್ನು ನೋವಿನ ಸಂವೇದನೆಗಳಿಂದಲೇ ವಿವರಿಸಿ ವಿಶ್ಲೇಷಿಸುತ್ತದೆ.

ಒಟ್ಟಾರೆಯಾಗಿ ಇಲ್ಲಿನ ಲೇಖನಗಳನ್ನು ಗಮನಿಸಿದಾಗ ಕಾಣುವ ಮುಖ್ಯ ಅಂಶವೆಂದರೆ ನಿರಂತರತೆ, ಸಮಗ್ರತೆ ಮತ್ತು ಏಕದೃಷ್ಟಿ. ಹೇಳಬೇಕಾದ್ದನ್ನು ಖಚಿತವಾಗಿ ನೇರವಾಗಿ ಅಷ್ಟೇ ಸರಳವಾಗಿ ಹೇಳುವಲ್ಲಿ ಅವರ ಒಟ್ಟು ಲೇಖನಗಳ ಸಾರ್ಥಕತೆಯಿದೆ.

**ಸಂಪಾದಿತ ಕೃತಿಗಳು:** ಚದುರಿಹೋದ ವಿಷಯ, ಸಂಗತಿ, ವಿಚಾರಗಳನ್ನು ಕ್ರೂಡೀಕರಿಸಿ, ಪರಿಷ್ಕರಿಸುವ ಕ್ರಿಯೆಯೇ ಸಂಪಾದನೆ, ಸಂಪಾದನೆ ಎಂದರೆ ಸಂಗ್ರಹಿಸು, ಆರ್ಜಿಸು, ಗಳಿಸು, ಪರಿಷ್ಕರಿಸು, ಇತ್ಯಾದಿ. ಇಲ್ಲಿ ನಿಜವಾದ ಅರ್ಥದಲ್ಲಿ ಮುದ್ರಿತಗೊಳ್ಳುವ ಪುಸ್ತಕವನ್ನು ಪರಿಷ್ಕರಿಸಿಕೊಡುವುದು ಸಂಪಾದನೆ ಎನಿಸಿಕೊಳ್ಳುತ್ತದೆ.

ಮಲ್ಲಿಕಾ ಘಂಟಿಯವರು ಅನೇಕ ಕೃತಿಗಳನ್ನು ಗಂಭೀರ ನೆಲೆಯಲ್ಲಿ ಸಂಗ್ರಹಿಸಿದ್ದಾರೆ. ಅದರಲ್ಲಿ 'ತನುವ ನೇಗಿಲ ಮಾಡಿ' ಹಾಗೂ 'ಕನ್ನಡ ಸಾಹಿತ್ಯ ಮತ್ತು ಮಹಿಳೆ' ಎಂಬುದು ಎರಡು ವಿಶೇಷ ಸಂಪಾದಿತ ಕೃತಿಗಳಾಗಿವೆ.

**ತನುವ ನೇಗಿಲ ಮಾಡಿ:** ಹತ್ತೊಂಬತ್ತು ಲೇಖನಗಳನ್ನುಳ್ಳ 'ತನುವ ನೇಗಿಲ ಮಾಡಿ' ಕೃತಿಯು ಕನಕದಾಸರನ್ನು ಕೇಂದ್ರವಾಗಿಟ್ಟುಕೊಳ್ಳುವ ಮೂಲಕ ರಚನೆಗೊಂಡ ಲೇಖನಗಳ ಸಂಪಾದಿತ ಕೃತಿಯಾಗಿದೆ. ವೈದಿಕರು ಸಮಾಜ ಸುಧಾರಕರಾಗಿ ಮತಗಳನ್ನು ಸ್ಥಾಪಿಸಿರಬಹುದು. ಆದರೆ ಯಾವೊಬ್ಬ ಶೂದ್ರನನ್ನು ಗುರುಪರಂಪರೆ ಯೊಳಗೆ ಬಿಟ್ಟುಕೊಂಡ ನಿದರ್ಶನಗಳಿಲ್ಲ. ಇದಕ್ಕೆ ಅಪವಾದದ್ದು ವ್ಯಾಸ–ಕನಕರ ಸಂಬಂಧ. ಇದಕ್ಕೂ ಕಾರಣಗಳು ವಿಭಿನ್ನ ನೆಲೆಗಳಲ್ಲಿವೆ. ಇದನ್ನು ಕುರಿತ ಚರ್ಚೆಯನ್ನು ಕನಕದಾಸರನ್ನು ಬಹುಮುಖೀ ನೋಟಗಳಿಂದ ಗ್ರಹಿಸುವ ಪ್ರಸ್ತುತ ಕೃತಿಯಲ್ಲಿ ಕಾಣಬಹುದಾಗಿದೆ.

ಶೂದ್ರ ಸಮುದಾಯಗಳ ಆಕರ್ಷಣೆ–ಭ್ರಮನಿರಸನಗಳ ಒಟ್ಟು ಮೊತ್ತವಾಗಿರುವ ಇಲ್ಲಿನ ಲೇಖನಗಳು ವಾಸ್ತವ ಪರಿಸ್ಥಿತಿಗಳನ್ನು ಮಾನದಂಡವನ್ನಾಗಿಸಿಕೊಂಡು ಸ್ಪಷ್ಟವಾಗಿವೆ. ಅವು ಸಮಕಾಲೀನ ಒತ್ತಾಸೆಯಿಂದ ಮೂಡಿಬಂದವಾಗಿವೆ. ಇಲ್ಲಿ ಎರಡು ರೀತಿಯ ಉದ್ದೇಶಗಳನ್ನು ಹೊಂದಲಾಗಿದೆ. ಒಂದು ಕನಕದಾಸರ ವ್ಯಕ್ತಿತ್ವ ಸಾಹಿತ್ಯವನ್ನು ವಸ್ತುನಿಷ್ಠವಾಗಿ ವಿಮರ್ಶಿಸುವುದು, ಮತ್ತೊಂದು ಶೂದ್ರ ಸಮುದಾಯಗಳ ಸೈದ್ಧಾಂತಿಕ ತಳಹದಿಯನ್ನು ಭದ್ರಗೊಳಿಸುವುದು. ಸಮಾಜದ ಆಳದಲ್ಲಿರುವ ವೈದಿಕ ಹಿತಾಸಕ್ತಿಯನ್ನು ಸಮರ್ಥವಾಗಿ ಎದುರಿಸುವ ಸಿದ್ಧತೆಗಳಲ್ಲಿ ನಾವು ತೊಡಗಬೇಕಿದೆ. ಅಂತಹ ಸಿದ್ಧತೆಗಳಿಗೆ ಇಲ್ಲಿಯ ಲೇಖನಗಳು ಮಾರ್ಗಸೂಚಿಯಾಗಿವೆ.

ಕನಕದಾಸರ ಚಿಂತನೆಗಳ ಪ್ರಸ್ತುತತೆಯೊಂದಿಗೆ ಪ್ರಾರಂಭವಾಗುವ ಈ ಕೃತಿಯು ಕನಕದಾಸರಲ್ಲಿ ವರ್ಗ, ವರ್ಣ ವಿಚಾರ, ಬದುಕು, ತಲ್ಲಣಗಳು, ಪಾರಮಾರ್ಥಿಕ ನಿಲುವುಗಳು, ಹೀಗೆ ಅನೇಕ ವಿಚಾರಗಳನ್ನೊಳಗೊಂಡ ಚರ್ಚೆಯನ್ನು ಕಾಣಬಹುದು. ಇಪ್ಪತ್ತನೆಯ ಶತಮಾನದಲ್ಲಿ ನಿಂತುಕೊಂಡು ನಾವು ಕನಕ, ಕನಕದಾಸರಾಗುವ ಮೂಲಕ ಅಪರಾಧ ಮಾಡಿದರು ಎಂದು ಕೂಗುತ್ತಿದ್ದೇವೆ. ಆ ರೀತಿ ಕನಕ ದಾಸರಾಗದಿದ್ದರೆ ನಮ್ಮ ಮಧ್ಯೆ ಇರುತ್ತಿದ್ದರೆ ಎಂದು ಯೋಚಿಸಬೇಕು.'[೫] ಆಗ ನಮ್ಮ ಮೇಲಿನ ಬಗೆಯ ಚಿಂತನೆ ಎಷ್ಟು ಹಾಸ್ಯಾಸ್ಪದ ಹಾಗೂ ಅಪಾಯಕಾರಿ ಎಂದು ತಿಳಿಯುತ್ತದೆ. ಇದು ಸಮಾಜದ ಹೊರಗೆ ನಿಂತು ಮಾತನಾಡುವ ರೀತಿ ಎಂಬ ಸಂಗತಿಯನ್ನು ತಿಳಿದುಕೊಳ್ಳಬಹುದು.

ಕನಕದಾಸರಲ್ಲಿ ವರ್ಗ, ವರ್ಣ, ವಿಚಾರ ಲೇಖನವು ಶ್ರೇಣೀಕೃತ ವ್ಯವಸ್ಥೆಯಲ್ಲಿ ಮೇಲ್ಜಾತಿಯ ದಬ್ಬಾಳಿಕೆಗೆ ಸಿಕ್ಕಿ ಅವಮಾನ, ಸಂಕಟಗಳನ್ನು ಅನುಭವಿಸಿದ ಮನಸು ಅಕ್ಷರ, ಅರಿವುಗಳೊಂದಿಗೆ ಬೆಳಕು ಪಡೆದು ಈ ಸಂಕಟದ ವಿರುದ್ಧ ಪರಿಶ್ರಮಿಸಿರುವ ಚಾರಿತ್ರಿಕ ಸತ್ಯವನ್ನು ನಮ್ಮ ಮುಂದಿಡುತ್ತದೆ.

'ಸಂಸ್ಕೃತೀಕರಣ'ದ ಮೂಲಕ ಪ್ರಾರಂಭ ಈ ಲೇಖನ 'ಸಂಸ್ಕೃತೀಕರಣವೆಂದರೆ' ಶ್ರೇಣೀಕರಣಗೊಂಡು ಸಮಾಜದಲ್ಲಿ ಕೆಳಗಿನ ಮೆಟ್ಟಿಲಿನಲ್ಲಿರುವವರು ಮೇಲಿನ ಮೆಟ್ಟಿಲನ್ನೇರುವುದಕ್ಕೆ ನಡೆಸುವ ಪ್ರಯತ್ನಗಳು. ಇದನ್ನು ಸವಿವರವಾಗಿ ತಿಳಿಸುತ್ತಾ, ಚರಿತ್ರೆಯುದ್ದಕ್ಕೂ ಈ ಸಂಸ್ಕೃತೀಕರಣದ ಮೋಹ ಹಲವು ಸಮುದಾಯಗಳನ್ನು ಹಾಗೂ ವ್ಯಕ್ತಿತ್ವಗಳನ್ನು ಕಾಡಿರುವ ಸಂಗತಿಗಳನ್ನು ನಮ್ಮ ಮುಂದೆ ತೆರೆದಿಡುತ್ತದೆ.

ಅವರ "ಕನಕದಾಸರ ಕೀರ್ತನೆಗಳಲ್ಲಿ ತಲ್ಲಣಗಳು" ಲೇಖನವು ತಿಮ್ಮಪ್ಪನ ತಲ್ಲಣಗಳು ಖಾಸಗಿ ತಲ್ಲಣಗಳಾಗದೆ ಸಮುದಾಯದೊಳಗಿನ ಸ್ವಾಭಿಮಾನಿ ಮನಸ್ಸುಗಳ ತಲ್ಲಣಗಳಾಗಿ ಆಧುನಿಕ ಕಾಲದಲ್ಲಿಯೂ ಹೆಪ್ಪುಗಟ್ಟಿರುವ ದುರಂತಕ್ಕೆ ಕಾರಣಗಳನ್ನು ಹುಡುಕುವ ತುರ್ತು ಪ್ರಯತ್ನವನ್ನು ಮಾಡಿದೆ. ಭಾರತದಂತಹ ದೇಶದಲ್ಲಿ ವರ್ಗ ಜಂಗಮ ದೀಕ್ಷೆ ಪಡೆದಿರುವುದೇ ಹೊರತು ಜಾತಿಯಲ್ಲ. ಹೀಗಾಗಿ ಸ್ಥಾವರಗೊಂಡಿರುವ ಜಾತಿಯನ್ನು ಮಿಸುಕಿಸುವ, ಮುಟ್ಟುವ, ಮೆಟ್ಟುವ ಪ್ರಜ್ವಲ ಶಕ್ತಿ ಇಲ್ಲಿ ಕಾಣಿಸಿಕೊಂಡಿದ್ದರೂ ಗುರಿ ಮುಟ್ಟುವುದಿಲ್ಲ ಎಂಬ ವಿಚಾರವನ್ನು ಓದುಗರ ಮುಂದಿಡುತ್ತಾರೆ.

ವ್ಯಾಸರಾಯರ ಶಿಷ್ಯತ್ವ ಲಭಿಸಿ ದಾಸಕೂಟದಲ್ಲಿಯೇ ಅತ್ಯಂತ ಬುದ್ಧಿವಂತ, ಪ್ರತಿಭಾವಂತನೆಂದು ಮೆಚ್ಚುಗೆ ಪಡೆದ ತಿಮ್ಮಪ್ಪನಿಗೆ ಕುಲವೊಂದು ಬೆಂಬಿಡದ ಭೂತವಾಗಿ ಕಾಡಿದ ತಲ್ಲಣವನ್ನು ತಿಳಿಸುವ ಮೂಲಕ ಪಾಂಡಿತ್ಯ, ಬುದ್ಧಿಮತ್ತೆ, ಜ್ಞಾನವೊಂದೆ ಜಗತ್ತಿನಲ್ಲಿ ಶೂದ್ರರನ್ನು ಮನುಷ್ಯರನ್ನಾಗಿಸುವ ಸತ್ಯಗಳು ಎಂದು ಘಂಟಿಯವರು ತಿಳಿಸುತ್ತಾರೆ.

'ಕನಕದಾಸರ ಕೀರ್ತನೆಗಳು' ಲೇಖನವು ಕನಕದಾಸರ ಕೀರ್ತನೆಗಳಲ್ಲಿರುವ ಪ್ರಮುಖ ಅಂಶಗಳಾದ ಆತ್ಮನಿವೇದನೆಯ ಅಂಶಗಳು, ಭಾಷೆ, ಇವುಗಳನ್ನು ಗುರುತಿಸುವ ಜೊತೆಗೆ ಕನಕದಾಸರ ಸಾಧಕ ಜೀವನವನ್ನು ಸ್ಥೂಲವಾಗಿ ನಿರೂಪಿಸುತ್ತದೆ. 'ಕನಕದಾಸರ ಚಿಂತನೆಗಳು' ಲೇಖನವು ಕನಕದಾಸರ ಚಿಂತನೆಗಳು ಹೇಗೆ ಪ್ರಸ್ತುತವಾಗುತ್ತದೆ ಎಂಬುದನ್ನು ತಿಳಿಸುತ್ತಾ, ದೇವರು–ಧರ್ಮ, ಪ್ರಭುತ್ವ–ಪುರೋಹಿತ ವರ್ಗಗಳಿಂದ ಈ ಸಮಾಜ ಹೇಗೆ ಕೆಟ್ಟುಹೋಗಿದೆ ಎಂಬುದನ್ನು ತಿಳಿಸುತ್ತದೆ. ಜೊತೆಗೆ ಕನಕದಾಸರ ಚಿಂತನೆಗಳು ಇಂದಿನ ಸಮಾಜಕ್ಕೆ ಸಮೃದ್ಧ ಸಂವೇದನೆಗಳಾಗಿ ಸ್ಪಂದಿಸುತ್ತದೆ ಎಂಬುದನ್ನು ಈ ಲೇಖನ ತಿಳಿಸುತ್ತದೆ.

ಶೂದ್ರ ಸಮುದಾಯಗಳ ಸೈದ್ಧಾಂತಿಕ ತಳಹದಿಯನ್ನು ಭದ್ರಗೊಳಿಸುವುದು. ಸಮಾಜದ ಆಳದಲ್ಲಿರುವ ವೈದಿಕ ಹಿತಾಸಕ್ತಿಯನ್ನು ಸಮರ್ಥವಾಗಿ ಎದುರಿಸುವುದು, ಅಂತಹ ಸಿದ್ಧತೆಗಳಲ್ಲಿ ನಾವು ತೊಡಗಬೇಕಾಗಿರುವ ತುರ್ತನ್ನು ಹಿಂದೂತ್ವದ ಸ್ವರೂಪ, ದಲಿತ ಮತ್ತು ಮತಾಂತರ, ರಾಷ್ಟ್ರೀಯತೆ ಮತ್ತು ಕೋಮುವಾದ, ಲೋಹಿಯಾ ಚಿಂತನೆ ಈ ಲೇಖನಗಳು ಸಮರ್ಥವಾಗಿ ನಿರ್ವಹಿಸಿವೆ.

'ಹಿಂದುತ್ವದ ಸ್ವರೂಪ' ಎಂಬ ಲೇಖನವು 'ಹಿಂದುತ್ವ' ಬ್ರಾಹ್ಮಣ ಸೃಷ್ಟಿಯಲ್ಲ. ಅದು ವೈದಿಕರ ಸೃಷ್ಟಿ ಮೊದಲೇ ಅಲ್ಲ. ಪುರೋಹಿತಶಾಹಿಗಳ ಸೃಷ್ಟಿಯಂತೂ ಅಲ್ಲವೇ ಅಲ್ಲ. ರಾಜಕೀಯ – ಆರ್ಥಿಕ ವೈರುಧ್ಯಗಳನ್ನು ದುರುಪಯೋಗ ಮಾಡಿಕೊಳ್ಳುವ ಮೂಲಕ ಭಾವನಾತ್ಮಕ ವಿಷಯವನ್ನು 'ಸಮಸ್ಯೆ' ಎಂದು ಸಾರುವ, ಪ್ರಚಾರ ಮಾಡುವ ತಂತ್ರ. ಇದು ಈಗ ಸಾಮ್ರಾಜ್ಯಶಾಹಿ, ಬಹುರಾಷ್ಟ್ರೀಯ ಕಂಪನಿಗಳು, ಎನ್.ಜಿ.ಓ.ಗಳು ಇಂಡಿಯಾವನ್ನು ಆಳುವ ವರ್ಗಗಳು. ಇಂಡಿಯಾದ ವಿಶಾಲವಾದ ಶೋಷಿತ ಜನಸಮುದಾಯಗಳು ಇವುಗಳ ನಿರಂತರ ಘರ್ಷಣೆ ಮತ್ತು ವೈರುಧ್ಯದ ಫಲವಾಗಿ 'ಹಿಂದುತ್ವ' ಶೋಷಕರ ಪಾಲಿನ ತಂತ್ರವಾಗಿ, ಕುತಂತ್ರವಾಗಿ, ವಿಧಾನವಾಗಿ, ಅಡ್ಡದಾರಿಯಾಗಿ, ಕೆಲವೊಮ್ಮೆ ರಾಜಮಾರ್ಗವಾಗಿ ಮೈದಾಳಿ ನಿಂತಿದೆ. ರಾಜಕೀಯ, ಆರ್ಥಿಕ ಸಮಸ್ಯೆಗಳು ಬಗೆಹರಿಯದ ಹೊರತು 'ಹಿಂದುತ್ವ' ನಾಶವಾಗುವುದಿಲ್ಲ ಎಂಬ ಅನೇಕ ವಿಚಾರಗಳನ್ನು ಓದುಗರ ಮುಂದೆ ತೆರೆದಿಡುತ್ತದೆ.

'ದಲಿತರು ಮತ್ತು ಮತಾಂತರ' ಲೇಖನವು ಮತಾಂತರವನ್ನು ಎರಡು ನೆಲೆಯಲ್ಲಿ ಗುರುತಿಸುತ್ತದೆ; ಒಂದು ಅಂಬೇಡ್ಕರ್ ಕಾಲದಲ್ಲಿ ಅಂದರೆ ಸ್ವತಃ ಅಂಬೇಡ್ಕರ್‌ರು ಲಕ್ಷಾಂತರ ಜನರೊಂದಿಗೆ ಕೈಗೊಂಡ ಮತಾಂತರ ಹಾಗೂ ಅವರ ಕಾಲಾನಂತರ ನಡೆಯುತ್ತಿರುವ ಮತಾಂತರ, ಅಂಬೇಡ್ಕರ್‌ರ ಹೋರಾಟದ ಪರಿಣಾಮವಾಗಿ ದಲಿತರ ಸ್ಥಿತಿಗತಿಗಳಲ್ಲಿ ಬದಲಾವಣೆಯಾಗಿದ್ದರೂ ಕೂಡ ಧರ್ಮ, ಜಾತಿಗಳ ಹೆಸರಿನಲ್ಲಿ ಅಸ್ಪೃಶ್ಯಾಚರಣೆ, ಕೊಲೆ–ಸುಲಿಗೆ, ಸಾಮಾಜಿಕ ಬಹಿಷ್ಕಾರ, ಅತ್ಯಾಚಾರ, ದೌರ್ಜನ್ಯ, ಇಂದೂ ಅವ್ಯಾಹತವಾಗಿ ನಡೆಯುತ್ತಿವೆ ಎಂಬ ವಿಚಾರಗಳನ್ನು ತಿಳಿಸುತ್ತದೆ.

'ಕನ್ನಡ ಸಾಹಿತ್ಯದಲ್ಲಿ ಲೋಹಿಯಾ ಚಿಂತನೆ' ಲೇಖನ ಲೋಹಿಯಾರವರು ಪ್ರಭುತ್ವ ಮತ್ತು ಹಿಂಸೆಯನ್ನು ವಿರೋಧಿಸುವ ಮೂಲಕ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಘಟ್ಟಗಳನ್ನು ವಿರೋಧಿಸಿದ ವಿಷಯಗಳನ್ನು ಚರ್ಚೆ ಮಾಡುತ್ತದೆ.

ಒಟ್ಟಾರೆ ಈ ಕೃತಿಯು ಕನಕದಾಸರ ಸಾಧಕ ಜೀವನವನ್ನು ಗುರುತಿಸುವ ಜೊತೆಗೆ ಅವರ ವ್ಯಕ್ತಿತ್ವ, ಜೀವನ ಚರಿತ್ರೆಯನ್ನು ವಸ್ತುನಿಷ್ಠವಾಗಿ ನಿರೂಪಿಸುತ್ತದೆ. ಆ ಮೂಲಕ ದಾಸಪಂಥದ ಪದ್ಮವ್ಯೂಹವನ್ನು ಪ್ರವೇಶಿಸಿದ ಶೂದ್ರನಾದ ಕನಕದಾಸನನ್ನು ಆದರ್ಶನನ್ನಾಗಿಸುವುದನ್ನು ಒತ್ತಾಯಿಸುತ್ತದೆ. ಕನಕದಾಸರು ಈ ದೀರ್ಘ ಇತಿಹಾಸದಲ್ಲಿ ಕನ್ನಡಿಗರ ಜೀವನದ ಮೇಲೆ ನಿರಂತರವಾಗಿ ಪ್ರಭಾವ ಬೀರುತ್ತಾ ಬಂದು ಕಥೆಯಾದ ಚರಿತ್ರೆಯನ್ನು ಕುರಿತು ಇಲ್ಲಿನ ಲೇಖನಗಳು ಬೆಳಕು ಚೆಲ್ಲುತ್ತವೆ.

## ಕನ್ನಡ ಸಾಹಿತ್ಯ ಮತ್ತು ಮಹಿಳೆ

ಕರ್ನಾಟಕ ಸಾಹಿತ್ಯ ಅಕಾಡೆಮಿಯು ರಾಜ್ಯದ ಒಳಭಾಗಗಳ ವಿವಿಧ ಸ್ಥಳಗಳಲ್ಲಿ ನಡೆಸುವ ವಿಚಾರ ಸಂಕಿರಣಗಳಂತೆ ರಾಜ್ಯದ ಹೊರಭಾಗಗಳಲ್ಲಿ ಕೂಡ ಆಯಾ ಸ್ಥಳೀಯ ಕನ್ನಡ ಸಂಘ ಸಂಸ್ಥೆಗಳೊಂದಿಗೆ ಸೇರಿ ಉಪಯುಕ್ತ ವಿಚಾರಸಂಕಿರಣಗಳನ್ನು ನಡೆಸುತ್ತಿದೆ. ಈ ನಿಟ್ಟಿನಲ್ಲಿ ದೆಹಲಿ ಕನ್ನಡ ಸಂಘದ ಸಹಯೋಗದಲ್ಲಿ ೨೦೦೨ ಫೆಬ್ರವರಿ ೪ ಮತ್ತು ೫ರಂದು ***"ಕನ್ನಡ ಸಾಹಿತ್ಯ ಮತ್ತು ಮಹಿಳೆ"*** ವಿಷಯ ಕುರಿತು ಎರಡು ದಿನಗಳ ವಿಚಾರಸಂಕಿರಣವನ್ನು ನಡೆಸಲಾಯಿತು. ಅಕಾಡೆಮಿಯು ಹಮ್ಮಿಕೊಳ್ಳುವ ಎಲ್ಲ ವಿಚಾರಸಂಕಿರಣಗಳು ಬರೀ ವೇದಿಕೆಯ ಮೇಲಿನ ಮಾತಾಗಿ, ಆಸಕ್ತಿ ಕೆರಳಿಸಿ ಖುಷಿಕೊಡುವ ತಾತ್ಕಾಲಿಕ ಸಂವಾದವಾಗಿ ಕೊನೆಗೊಳ್ಳಬಾರದೆಂಬ ಆಶಯದಿಂದ ಮಂಡಿತವಾದ ಪ್ರಬಂಧಗಳನ್ನು ಸಂಕಲಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿರುವ ಕೃತಿಯೇ "ಕನ್ನಡ ಸಾಹಿತ್ಯ ಮತ್ತು ಮಹಿಳೆ".

***"ಕನ್ನಡ ಸಾಹಿತ್ಯ ಮತ್ತು ಮಹಿಳೆ"*** ಎಂಬ ಸ್ಥೂಲ ಶೀರ್ಷಿಕೆಯನ್ನು ಇಟ್ಟುಕೊಂಡರೂ, ಈ ಎರಡು ದಿನಗಳ (೪.೫ ಫೆಬ್ರವರಿ ೨೦೦೬) ವಿಚಾರಸಂಕಿರಣದಲ್ಲಿ ವಿವಿಧ ರಂಗಗಳಲ್ಲಿ ಮಹಿಳೆಯ ಅವಕಾಶಗಳ ಇತಿಮಿತಿಗಳನ್ನು, ವಿವಿಧ ಕ್ಷೇತ್ರಗಳಲ್ಲಿನ ಅವಳ ಬಿಕ್ಕಟ್ಟುಗಳು ಮತ್ತು ಸಾಧನೆಗಳನ್ನು ದಾಖಲಿಸುವ ಉದ್ದೇಶದಿಂದ ಮೊದಲ ಗೋಷ್ಠಿಯಾದ 'ಮಹಿಳಾ ಪ್ರತಿನಿಧೀಕರಣ'ದಲ್ಲಿ ಸಾಮಾಜಿಕ ರಂಗ, ರಾಜಕೀಯ ರಂಗ ಮತ್ತು ಆರ್ಥಿಕ ರಂಗಗಳಲ್ಲಿ ಮಹಿಳೆಯ ಪ್ರತಿನಿಧೀಕರಣ ಎಂಬ ಮೂರು ವಿಷಯಗಳ ಸುತ್ತ ವಾಗ್ವಾದವನ್ನು ನಡೆಸಿ ತಮ್ಮ ಆಲೋಚನೆಗಳನ್ನು ಹಂಚಿಕೊಂಡಿದ್ದಾರೆ.

ಎರಡನೆಯ ಗೋಷ್ಠಿ ***"ಮಹಿಳೆ-ಆಧುನಿಕತೆಯ ಜೊತೆಗಿನ ಅನುಸಂಧಾನ"*** ಎಂಬುದಾಗಿದ್ದು, ಇದರಲ್ಲಿ ಇತ್ತೀಚಿನ ವಾಸ್ತವಗಳಾದ ಜಾಗತೀಕರಣ, ಕೋಮುವಾದ ಮತ್ತು ಭಯೋತ್ಪಾದನೆಗಳಂತಹ ಸಂಗತಿಗಳು ಮಹಿಳೆಯ ಬದುಕನ್ನು ಹೇಗೆ ಪ್ರಭಾವಿಸಿವೆ ಮತ್ತು ಅವಳ ಮೇಲೆ ಎಂತಹ ಒತ್ತಡಗಳನ್ನು ನಿರ್ಮಿಸಿವೆ ಎಂಬುದನ್ನು ಅವಲೋಕಿಸುವ ಕಾಳಜಿಗಳನ್ನು ಇಟ್ಟುಕೊಂಡು ಪ್ರಬಂಧಗಳನ್ನು ಮಂಡಿಸಿದ್ದಾರೆ.

ಮೂರನೆಯ ಗೋಷ್ಠಿ ***"ಸಾಹಿತ್ಯ ಮತ್ತು ಮಹಿಳೆ"*** ಎಂಬುದಾಗಿದ್ದು, ಇದರಲ್ಲಿ ಭಕ್ತಿಸಾಹಿತ್ಯ, ಜನಪದ ಸಾಹಿತ್ಯ ಮತ್ತು ಆಧುನಿಕ ಕಾವ್ಯ ಮತ್ತು ಕಥನಗಳಲ್ಲಿ ಮಹಿಳೆಯ ಪ್ರತಿನಿಧೀಕರಣದ ವಿನ್ಯಾಸಗಳನ್ನು ಹುಡುಕಿ ವಿಶ್ಲೇಷಿಸುವ, ಸಾಧನೆಗಳನ್ನು ದಾಖಲಿಸುವ ಮುಖ್ಯ ಉದ್ದೇಶವನ್ನು ಹೊಂದಿತ್ತು. ಹೀಗಾಗಿ ಭಕ್ತಿ ಚಳವಳಿಯಲ್ಲಿ ಮಹಿಳೆ, ಮಹಿಳಾ ಕಥನಸಾಹಿತ್ಯದಲ್ಲಿ ಕುಟುಂಬದ ಪರಿಕಲ್ಪನೆ, ಮಹಿಳಾ ಕಾವ್ಯ : ಭಿನ್ನಧ್ವನಿಗಳು ಮತ್ತು

ಜಾನಪದದಲ್ಲಿ ಮಹಿಳೆ ಎಂಬ ವಿಷಯಗಳ ಕುರಿತಂತೆ ಗಂಭೀರವಾದ ಮತ್ತು ವಿಭಿನ್ನವಾದ ಚಿಂತನಾ ಕ್ರಮಗಳನ್ನು ಬೆಳೆಸಿದ್ದಾರೆ.

ಕೊನೆಯಲ್ಲಿ ಕವಿಗೋಷ್ಠಿ ನಡೆದು, ಅಲ್ಲಿ ಓದಲಾದ ಕವಿತೆಗಳಲ್ಲಿ ಆಯ್ದು ಕೆಲವನ್ನು ಇದರಲ್ಲಿ ನೀಡಿದ್ದಾರೆ.

**ಮಹಿಳಾ ಪ್ರತಿನಿಧೀಕರಣ:** ಪ್ರಸ್ತುತ ಪ್ರಬಂಧವು ಹಾಗೂ ಸಾಮಾಜಿಕ ಕೌಟುಂಬಿಕ ಕ್ಷೇತ್ರದಲ್ಲಿ ಮಹಿಳೆಗೆ ವಹಿಸಲಾದ ಕಾರ್ಯಗಳ ಪ್ರಮಾಣವೆಷ್ಟು? ಮಹಿಳೆಯರು ಅದನ್ನು ಎಂತಹ ಒತ್ತಡದಲ್ಲಿ ನಿರ್ವಹಿಸುತ್ತಿದ್ದಾರೆ? ಅದರ ಆಧಾರದ ಮೇಲೆ ಸಾಮಾಜಿಕ ಕ್ಷೇತ್ರದಲ್ಲಿ ಮಹಿಳೆಯರ ಪ್ರತಿನಿಧೀಕರಣದ ಸಾಫಲ್ಯ ಮತ್ತು ಅಸಾಫಲ್ಯಗಳನ್ನು ಅರ್ಥಮಾಡಿಕೊಳ್ಳಬೇಕಾದ ದಾರಿ ಯಾವುದು? ಅದರ ಅನಿವಾರ್ಯತೆ ಏನು? ಇದುವರೆಗೆ ಸಾಮಾಜಿಕ ಕ್ಷೇತ್ರಕ್ಕೆ ಆಕೆಯನ್ನು ಪರಿಚಯಿಸಲಾದ ಬಗೆ ಯಾವುದು ಎಂಬುದನ್ನು ಚರ್ಚಿಸಿದ್ದಾರೆ.

ಚರಿತ್ರೆಯಲ್ಲಿ ಹೆಣ್ಣು ನೇರವಾಗಿ ರಾಜಕೀಯ, ರಾಜಕಾರಣ ಮಾಡಿದ ಉದಾಹರಣೆಗಳು ತುಂಬಾ ಕಡಿಮೆ. ಆದರೆ ಅನ್ಯ ಕಾರಣಗಳಿಂದ ಅನ್ಯರ ಮೂಲಕ ರಾಜಕೀಯ ರಂಗದಲ್ಲಿ ದಾಳದಂತೆ ಬಳಸಲ್ಪಟ್ಟಿರುವಳು. ಚಕ್ರವರ್ತಿಯನ್ನು ಹೆತ್ತು ಕೊಡುವ ಮತ್ತು ಬೆಳೆಸಿಕೊಡುವ ಅತ್ಯುತ್ತಮ ಸೇವಕಿ ಹೆರಿಗೆ ಯಂತ್ರದಂತೆ, ಹಾಗೂ ರಾಜಕೀಯ ನೆಲೆಯಲ್ಲಿ ಎದುರಾಳಿಯನ್ನು ಸದೆ ಬಡಿಯುವಲ್ಲಿ ಸಮರ್ಥವಾಗಿ ಬಳಸಲ್ಪಡುವ ಆಯುಧದಂತೆಯೂ ಹೆಣ್ಣು ಕಾಣಿಸಿಕೊಂಡಿದ್ದಾಳೆ ಎಂಬುದನ್ನು ಅನೇಕ ಉದಾಹರಣೆಗಳ ಮೂಲಕ 'ಮಹಿಳಾ ಪ್ರತಿನಿಧೀಕರಣ-ರಾಜಕೀಯ ಕ್ಷೇತ್ರ' ಪ್ರಬಂಧ ತಿಳಿಸುತ್ತದೆ.

'ಔದ್ಯೋಗಿಕ ಕ್ಷೇತ್ರದಲ್ಲಿ' ಮಹಿಳಾ ಪ್ರತಿನಿಧೀಕರಣ ಪ್ರಬಂಧದಲ್ಲಿ ಕೃಷಿ ಪ್ರಧಾನ ಸಮಾಜ ಹಾಗೂ ಆಧುನಿಕ ಸಮಾಜಗಳಲ್ಲಿ ಸ್ತ್ರೀಯರ ಆರ್ಥಿಕ ಪ್ರತಿನಿಧೀಕರಣದ ಸ್ವರೂಪವನ್ನು ವಿವರಿಸಲು ಪ್ರಯತ್ನಿಸಿದೆ. ಎರಡನೆಯ ಗೋಷ್ಠಿಯ 'ಮಹಿಳೆ- ಆಧುನಿಕತೆಯ ಜೊತೆಗಿನ ಅನುಸಂಧಾನ'ವು ಇವತ್ತು ನಾವೇನು ಮಾತನಾಡುತ್ತೇವೊ ಜಾಗತೀಕರಣ, ಕೋಮುವಾದ, ಭಯೋತ್ಪಾದನೆಗಳಂತಹ ವಿಷಯವನ್ನು ಕುರಿತು ಚರ್ಚಿಸುತ್ತದೆ.

*'ಜಾಗತೀಕರಣ ಮತ್ತು ಮಹಿಳೆ'* ಪ್ರಬಂಧವು 'ಜಾಗತೀಕರಣ' ಎಂಬ ಮೋಹಕ ಹೆಸರಿನ ವಿಲಾಸೀ ಗಾರುಡಿಗನ ಪವಾಡಗಳು ದೇಶ-ಕಾಲದ ಗಡಿಗಳು ಇಲ್ಲದೆ ಎಲ್ಲೆಂದರಲ್ಲಿ ಕಾಣಿಸಿಕೊಳ್ಳುವುದನ್ನು 'ಸ್ಥಳೀಯ'ವಾದ ಉದಾಹರಣೆಗಳ ಮೂಲಕ ಅರ್ಥ ಮಾಡಿಸುವ ಪ್ರಯತ್ನ ಮಾಡಿದ್ದಾರೆ. 'ಕೋಮುವಾದ ಮತ್ತು ಮಹಿಳೆ' ಪ್ರಬಂಧವು ಕೋಮುವಾದ ಕೇವಲ ಮಹಿಳೆಯ ಸಮಸ್ಯೆಯೇ ಅಲ್ಲವೇ ಎಂಬುದನ್ನು ಎತ್ತಿಕೊಳ್ಳುವ ಮೂಲಕ ಕೋಮುವಾದವನ್ನು ಯಾರು ಹುಟ್ಟುಹಾಕುತ್ತಾರೆ. ಅದರಲ್ಲಿ ಯಾರ್‍ಯಾರ ಪಾಲು ಎಷ್ಟು? ಅದರ ರಾಜಕೀಯ

ಹಿನ್ನಲೆ ಏನು? ಮೊದಲಾದ ವಿಚಾರಗಳನ್ನು ಸ್ಥೂಲವಾಗಿ ಪ್ರಸ್ತಾವಿಸಿ, ಕೋಮುವಾದಿ ಸಂಘರ್ಷಗಳು ಮಹಿಳೆಯ ಮೇಲೆ ಬೀರುವ ಪರಿಣಾಮಗಳ ಕಡೆಗೆ ವಿಶೇಷವಾಗಿ ಒತ್ತು ನೀಡಿ ಚರ್ಚಿಸಿದ್ದಾರೆ.

ಬದುಕಿನ ಬಗೆಗಿನ ತಲ್ಲಣಗಳನ್ನು ಆತಂಕಗಳನ್ನು ಹುಟ್ಟಿಸುವ ಸಂಚಾರಿ ಭಾವವಾಗಬಹುದಾದ ಭಯೋತ್ಪಾದನೆ, ಸಾವು ಮತ್ತು ವಿನಾಶದ ಪರಿಣಾಮದಲ್ಲಿ ಸ್ಥಾಯಿಯಾಗಿದೆ. ಈ ಭಯೋತ್ಪಾದನೆ ಜಗತ್ತಿನ ಬಹುದೊಡ್ಡ ಸಮಸ್ಯೆಯಾಗಿದ್ದು, ಪರ್ಯಾಯಗಳನ್ನು ಚಿಂತಿಸಬಹುದಾದದ್ದು ಸಹಜ ಸುಲಭವಲ್ಲ. ಭಯೋತ್ಪಾದನೆಯು ಆಧುನಿಕ ಸಾಧನಗಳೊಂದಿಗೆ ಬೆಳೆಯುತ್ತಿರುವ ಬಗೆಯನ್ನು ವಿವರಿಸುತ್ತಾರೆ. ಹೆಣ್ಣು ತನ್ನದು ಎಂದುಕೊಂಡಿದ್ದನ್ನು ಪಡೆಯಬೇಕಾದನ್ನು ಒತ್ತಡ, ಅನಿವಾರ್ಯತೆ ಎಂದು ಪರಿಭಾವಿಸಿದಾಗ ಭಯೋತ್ಪಾದನೆಯಂತಹ ಸಮಸ್ಯೆ ಗಂಭೀರತೆ ಅರ್ಥವಾಗುತ್ತದೆ ಎಂದು ಪ್ರಬಂಧವು ತಿಳಿಸುತ್ತದೆ.

***'ಸಾಹಿತ್ಯ ಮತ್ತು ಮಹಿಳೆ'*** ಎಂಬ ಮೂರನೇ ಗೋಷ್ಠಿಯಲ್ಲಿ ಭಕ್ತಿ ಸಾಹಿತ್ಯ, ಜನಪದ ಸಾಹಿತ್ಯ ಮತ್ತು ಆಧುನಿಕ ಕಾವ್ಯ ಮತ್ತು ಕಥನಗಳಲ್ಲೂ ಮಹಿಳೆಯ ಪ್ರತಿನಿಧೀಕರಣದ ವಿನ್ಯಾಸಗಳನ್ನು ಹುಡುಕಿ ವಿಶ್ಲೇಷಿಸಿ, ಸಾಧನೆಗಳನ್ನು ದಾಖಲಿಸಿದ್ದಾರೆ.

***'ಭಕ್ತಿ ಚಳವಳಿಯಲ್ಲಿ ಮಹಿಳೆ'*** ಪ್ರಬಂಧವು ಭಕ್ತಿ ಪರಂಪರೆಗಳು ಭಾರತೀಯ ಸಂಸ್ಕೃತಿಯ ಬಹಳ ದೊಡ್ಡ ಭಾಗವಾಗಿದೆ. ಮತ್ತು ಕೇಂದ್ರ ಸ್ಥಾನದಲ್ಲಿದೆ ಎನ್ನುವುದು ತಿಳಿಸುತ್ತಾ, ಭಕ್ತಿ ಪರಂಪರೆಗೆ ಮಹಿಳೆಯ ಕೊಡುಗೆ, ಭಕ್ತಿ ಚಳವಳಿಯಲ್ಲಿ ಭಾಗವಹಿಸಿದ ಮಹಿಳೆಯರು ಅವರ ಸಾಹಿತ್ಯವನ್ನು ಚರ್ಚಿಸುತ್ತಾ ಪ್ರಾತಿನಿಧಿಕ ರಾಜಕಾರಣವನ್ನು ಆಧರಿಸಿದ ಸಂಬಂಧಕ್ಕಿಂತ ಹೆಚ್ಚು ಆಳದ ಸಂಬಂಧ ಸ್ತ್ರೀತ್ವಕ್ಕೆ ಮತ್ತು ಭಕ್ತಿ ಆಂದೋಲನಕ್ಕೆ ಇದೆ ಎನ್ನುವುದನ್ನು ಸಂಕ್ಷಿಪ್ತವಾಗಿ ಸಾಕಷ್ಟು ಅಡಕವಾಗಿ ತಿಳಿಸುತ್ತಾರೆ.

ಸಾಂಸ್ಕೃತಿಕ–ಸಾಮಾಜಿಕ ಪರಿವರ್ತನೆಗಳಿಗೆ ಸಂವಾದಿಯಾಗಿರುವ 'ಕುಟುಂಬ'ದ ಮಾದರಿಯು ಸಾಹಿತ್ಯದ ಒಳಗೂ ಸದಾ ಬದಲಾಗುತ್ತಿರುತ್ತದೆ. ಕುಟುಂಬದ ಚಿತ್ರಣಕ್ಕಷ್ಟೇ ಪ್ರಾಧಾನ್ಯತೆಯನ್ನು ಕೊಟ್ಟಿರುವ ಈ ಪ್ರಬಂಧವು ಇಪ್ಪತ್ತನೆಯ ಶತಮಾನದ ಐದು ಆರನೆಯ ದಶಕಗಳಲ್ಲಿ ಬರೆಯುತ್ತಿದ್ದ ತ್ರಿವೇಣಿ, ವಾಣಿ, ಎಂ.ಕೆ.ಇಂದಿರಾ, ಅನುಪಮ ನಿರಂಜನ ಮುಂತಾದವರ ಕೃತಿಗಳನ್ನು ಮಾದರಿಯಾಗಿರಿಸಿಕೊಂಡು ಮಹಿಳಾ ಬರಹಗಳ ಕೇಂದ್ರ ಹಾಗೂ ಪುರುಷರ ಕೃತಿಗಳ ಪರಿಧಿಗಳಲ್ಲಿ ಕುಟುಂಬವು ಕಾಣಿಸಿಕೊಳ್ಳುವುದನ್ನು ಕುಟುಂಬವು ಸಮಷ್ಟಿಯಿಂದ ವ್ಯಷ್ಟಿಯ ಕಡೆಗೆ ಸಾಗುತ್ತ ಬಂದಿರುವ ಬಗೆಯನ್ನು ಮಹಿಳಾ ಕಥನ 'ಸಾಹಿತ್ಯದಲ್ಲಿ ಕುಟುಂಬದ ಪರಿಕಲ್ಪನೆ' ಪ್ರಬಂಧವು ತಿಳಿಸುತ್ತದೆ.

ವಿಚಾರ ಸಂಕಿರಣದ ಕೊನೆಯಲ್ಲಿ ಕವಿಗೋಷ್ಠಿ ನಡೆದಾಗ ಅಲ್ಲಿ ಓದಲಾದ ಕವಿತೆಗಳಲ್ಲಿ ಕೆಲವನ್ನು ಆಯ್ದು ಈ ಕೃತಿಯಲ್ಲಿ ನೀಡಲಾಗಿದೆ. ಆ ಕವಿತೆಗಳೆಂದರೆ 'ಪಂಜಾಬಿನ ಆ ಪುಟ್ಟ ಹುಡುಗಿಯ ಪತ್ರ', 'ಹೊಸ ನಾಡಗೀತೆ', 'ಬೆಳಕು ಬಿತ್ತುವ ಕಾಲ', 'ನಿಹಾರಿಕಾ', 'ಲಯ', 'ಹಾವು', 'ಪಯಣ', 'ಕಳೆದೈತೋ ಪ್ರೀತಿ ಕಳೆದೈತೋ', 'ಗರ್ಭ ಕಟ್ಟಲಿಲ್ಲ ಏಕೆ', 'ಸೇವಕನ ಮನೆಯಿಂದ' ಇತ್ಯಾದಿ

ಸತೀಶ ಕುಲಕರ್ಣಿ ಅವರ 'ಹೊಸ ನಾಡಗೀತೆ' ಕವಿತೆಯ:

ಗೋಳಿಲ್ಲದ ಗುಂಡಿಲ್ಲದ
ನಾಡ ಕಟ್ಟತೇವ
ನೂರು ಮನಸಿನ
ಕೋಟಿ ಕನಸಿನ
ಹಾಡ ಕಟ್ಟತೇವ
ನಾವು ನಾಡ ಕಟ್ಟುತ್ತೇವ ಎಂದು ಸಾರುತ್ತದೆ.

ಹೊಸ ನಾಡನ್ನು ಕಟ್ಟುವ ತವಕದಲ್ಲಿರುವ ಕವನವು 'ಕಟ್ಟುವೆವು ನಾವು' ಎಂಬ ಅಡಿಗರ ಕವಿತೆಯನ್ನು ನೆನಪಿಸುವಂತಿದೆ. ಹೊಸ ನಾಡನ್ನು ಕಟ್ಟಲು ನೂರಾರು ಮನಸ್ಸು ಕೋಟಿ ಕೋಟಿ ಕನಸು ಹೊತ್ತು ನಿಂತಿರುವುದನ್ನು ಈ ಕವಿತೆ ಧ್ವನಿಸುತ್ತದೆ.

'ಪಯಣ' ಕವಿತೆಯು ಬದುಕನ್ನು ಎದರಿಸುವ ರೀತಿಯನ್ನು, ವಿವೇಕವನ್ನು ಕಲಿಸುವಂತಿದೆ. ಈ ಬದುಕೆಂಬ ಪಯಣದಲ್ಲಿ ಮುಂದೆ ಮುಂದೆ ಹೆಜ್ಜೆಯಿಡಬೇಕೇ ವಿನಃ ಹಿಂದೆ ಹೆಜ್ಜೆಯನಿಡಬಾರದೆಂಬುದನ್ನು ತಿಳಿಸುತ್ತದೆ.

ಶಕ್ತಿಗುಂದಿ ಕಾಲು ಕುಸಿದು
ಅಡೆತಡೆಗಳ ಹೊಡೆತಗಳಲ್ಲಿ ಎಡವುತ್ತ
ಕತ್ತು ನೋವಾಗುವ ಹಿನ್ನೋಟ ಬೇಡ
ಸಾಕು ಮುಂದೆ ಸಾಗು
ತೃಪ್ತಿ ನೆಮ್ಮದಿಯ ತಂಗುದಾಣದೆಡೆಗೆ

ಗುರಿ ತಲುಪುವ ತನಕ ನಾವು ಎಲ್ಲೂ ವಿಶ್ರಾಂತಿ ಪಡೆಯದೆ ಮುಂದೆ ಮುಂದೆ ಸಾಗಿ, ಗುರಿ ತಲುಪಿದ ನಂತರ ತೃಪ್ತರಾಗಬೇಕು ಎಂದು ಕವಿ ತಿಳಿಸುತ್ತಾರೆ.

'ಕನ್ನಡ ಸಾಹಿತ್ಯ ಮತ್ತು ಮಹಿಳೆ' ಎಂಬ ರಾಷ್ಟ್ರೀಯ ವಿಚಾರಸಂಕಿರಣದಲ್ಲಿ ನಡೆದ ಮುಖ್ಯ ವಾಗ್ವಾದಗಳು ಈ ಪುಸ್ತಕದ ಮೂಲಕ ಹೊರಬಂದಿದ್ದು ಒಟ್ಟಾರೆಯಾಗಿ ಈ ಕೃತಿಯು ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡು ಪ್ರಕಟವಾದ ಗಂಭೀರ ವಿಶ್ಲೇಷಣಾತ್ಮಕ ಕೃತಿಯಾಗಿದೆ.

**ಸಂಶೋಧನೆ:** ಸಂಶೋಧನಾ ಪ್ರಬಂಧಗಳನ್ನು ಗಮನಿಸಿದರೆ ಕನ್ನಡ ಸಾಹಿತ್ಯ ಹಾಗೂ ಕರ್ನಾಟಕ ಸಂಸ್ಕೃತಿಯ ಹಲವು ಮಗ್ಗಲುಗಳ ಪರಿಚಯವಾಗುತ್ತದೆ. ಸಂಶೋಧನೆಯು ಕಾವ್ಯ, ಕಾದಂಬರಿ, ನಾಟಕ, ಕಥೆ, ಶಾಸನ, ಜಾನಪದ, ಭಾಷೆ ಮುಂತಾದ ಹಲವು ಪ್ರಕಾರಗಳಲ್ಲಿ ಅಧ್ಯಯನ ನಡೆದಿವೆ. ಅಧ್ಯಯನದ ದೃಷ್ಟಿಯಿಂದ ಸಂಶೋಧನೆಯನ್ನು ೧. ಕವಿ–ಕಾವ್ಯ ಅಧ್ಯಯನ, ೨. ಸಾಂಸ್ಕೃತಿಕ ಅಧ್ಯಯನ, ೩. ಹಸ್ತಪ್ರತಿಶಾಸನಗಳ ಅಧ್ಯಯನ, ೪. ತೌಲನಿಕ ಅಧ್ಯಯನ ಎಂದು ವರ್ಗೀಕರಿಸಿಕೊಳ್ಳಲಾಗಿದೆ. ಇದರಲ್ಲಿ ಮಲ್ಲಿಕಾ ಘಂಟಿ ಅವರು ನಡೆಸಿರುವ 'ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ' ಸಂಶೋಧನಾ ಪ್ರಬಂಧವು ಕವಿ–ಕಾವ್ಯ ಅಧ್ಯಯನದಲ್ಲಿ ಸೇರ್ಪಡೆಯಾಗುತ್ತದೆ.

'ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ' ಎಂಬ ಶೀರ್ಷಿಕೆಯೊಂದಿಗೆ ಅಧ್ಯಯನ ಮಾಡಿರುವ ಮಲ್ಲಿಕಾ ಘಂಟಿ (೧೯೯೪) ಅವರು ಸುಮಾರು ಏಳು ದಶಕಗಳಷ್ಟು ವ್ಯಾಪ್ತಿಯನ್ನು ಹೊಂದಿರುವ ಮಹಿಳಾ ಕಥಾ ಕ್ಷೇತ್ರವನ್ನು ಸಮಷ್ಟಿ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ನವೋದಯ ಪೂರ್ವ, ನವೋದಯ, ಪ್ರಗತಿಶೀಲ, ನವ್ಯ ಹಾಗೂ ಬಂಡಾಯ–ದಲಿತಗಳಲ್ಲಿ ಮಹಿಳಾ ಕಥಾ ಸಾಹಿತ್ಯದ ಆಶಯಗಳನ್ನು ಗುರುತಿಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳಲ್ಲಿ ಸಣ್ಣಕಥೆಯು ಒಂದು. ಇದು ವಿವಿಧ ವಸ್ತು, ಭಾಷೆ, ರೂಪ, ತಂತ್ರಗಳಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಸಣ್ಣ ಕಥೆಯು ಬೆಳವಣಿಗೆಗೆ, ಶ್ರೀಮಂತಿಕೆಗೆ ಅನೇಕ ಪ್ರತಿಭಾನ್ವಿತ ಲೇಖಕರು ಕೊಡುಗೆ ಸಲ್ಲಿಸಿದ್ದಾರೆ. ಅದರಲ್ಲಿ ಪುರುಷರಂತೆ ಮಹಿಳೆಯರ ಕೊಡುಗೆಯೂ ಗಮನಾರ್ಹವಾಗಿದೆ. ತಮ್ಮದೇ ಆದ ಅನುಭವ, ಆಲೋಚನೆಗಳ ಮೂಲಕ ನಡೆಸಿದ ಅಧ್ಯಯನ ಕಥಾಸಾಹಿತ್ಯದ ಗಂಭೀರವಾದ ಅಧ್ಯಯನವು ಯೋಗ್ಯವೆನಿಸಿದೆ. ಅಂಥ ಅಧ್ಯಯನದ ಒಂದು ಉತ್ತಮ ಮಾದರಿಯಾಗಿದೆ ಮಲ್ಲಿಕಾಘಂಟಿಯವರ 'ಕನ್ನಡದಲ್ಲಿ ಮಹಿಳಾ ಸಾಹಿತ್ಯ' ಎಂಬ ಸಂಶೋಧನ ಪ್ರಬಂಧ.

ಮಲ್ಲಿಕಾ ಘಂಟಿಯ ಸಂಶೋಧನಾ ಮಹಾಪ್ರಬಂಧವು ಹತ್ತು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ನಿರ್ದಿಷ್ಟವಾಗಿ ತಿಳಿಸುವ ಮಲ್ಲಿಕಾ ಘಂಟಿಯವರು ಮುಂದೆ ಹಂತಹಂತವಾಗಿ ಮಹಿಳಾ ಕಥಾಸಾಹಿತ್ಯದ ಸ್ವರೂಪ, ಹಿನ್ನೆಲೆ, ಇತಿಹಾಸ, ವಸ್ತು, ಶಿಲ್ಪ, ತಂತ್ರ, ಇತಿಮಿತಿ,

ವೈಶಿಷ್ಟ್ಯ ಹಾಗೂ ಸಾಧ್ಯತೆಗಳನ್ನು ಸಮರ್ಪಕವಾಗಿ ಗುರುತಿಸಿದ್ದಾರೆ. ಆರಂಭದಿಂದ ೧೯೮೫ರವರೆಗಿನ ಕಾಲವ್ಯಾಪ್ತಿಯಲ್ಲಿ ಬರುವ ಪ್ರಮುಖ ಕಥೆಗಾರ್ತಿಯರ ಕಥೆಗಳು ಇಲ್ಲಿ ವಿವಿಧ ದೃಷ್ಟಿಕೋನದ ವಿಚಾರ ವಿಮರ್ಶೆಗೆ ಒಳಗಾಗಿದೆ.

ಕಥಾ ಸಾಹಿತ್ಯದ ಹಿನ್ನೆಲೆ, ಸ್ವರೂಪ, ಲಕ್ಷಣ, ಕಥೆಯ ಉಗಮ, ವಿಕಾಸ, ಆಧುನಿಕ ಕನ್ನಡ ಕಥಾ ಸಾಹಿತ್ಯ ಪರಂಪರೆಯನ್ನು ಒಳಗೊಂಡಂತೆ ಎರಡನೆಯ ಅಧ್ಯಾಯವು ಕಂಡುಬರುತ್ತದೆ. ಮೂರನೆಯ ಅಧ್ಯಾಯದಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹಿಳೆ ನಡೆದು ಬಂದ ದಾರಿಯನ್ನು ಅವಳು ಸೃಷ್ಟಿಸಿದ ಕವಿತೆ, ಕಥೆ, ಕಾದಂಬರಿ, ನಾಟಕಗಳ ಹಿನ್ನಲೆಯನ್ನು ಗುರುತಿಸುತ್ತ ಆಧುನಿಕ ಕನ್ನಡ ಸಾಹಿತ್ಯಕ್ಕೆ ಅವಳು ಕೊಟ್ಟ ಕೊಡುಗೆಯನ್ನು ತಿಳಿಸುತ್ತಾರೆ.

ನಾಲ್ಕನೆಯ ಅಧ್ಯಾಯವು ಮಹಿಳಾ ಸಾಹಿತ್ಯದ ಇತಿಹಾಸವನ್ನೊಳಗೊಂಡ ಇಡೀ ಪ್ರಬಂಧದಲ್ಲಿಯೇ ಹೆಚ್ಚು ನಿಡಿದಾದ ಭಾಗ, ಇಲ್ಲಿ ಮಹಿಳಾ ಕಥಾ ಸಾಹಿತ್ಯವನ್ನು ನವೋದಯ ಪೂರ್ವ, ನವೋದಯ, ಪ್ರಗತಿಶೀಲ–ನವ್ಯ, ಬಂಡಾಯ–ದಲಿತ ಎಂದು ವಿಭಾಗಿಸಿಕೊಂಡು, ಆಯಾ ಧೋರಣೆಯನ್ನಿಟ್ಟುಕೊಂಡು ಬರೆದ ಕತೆಗಾರ್ತಿಯರ ಪರಿಚಯ ಮತ್ತು ಕಥೆಗಳ ವಿಮರ್ಶೆಯನ್ನು ವಸ್ತುನಿಷ್ಠವಾಗಿ ಮಾಡಿ, ಪ್ರತಿಯೊಬ್ಬರ ವೈಶಿಷ್ಟ್ಯವನ್ನು ಎತ್ತಿ ಹಿಡಿದಿದ್ದಾರೆ.

ಪ್ರಬಂಧದ ಹೃದಯ ಭಾಗವೆಂದರೆ ಐದರಿಂದ ಒಂಬತ್ತರವರೆಗಿನ ಅಧ್ಯಾಯಗಳು, ಐದನೆಯ ಅಧ್ಯಾಯ ಮಹಿಳೆಯರ ಕಥೆಗಳ ವಸ್ತುವಿಗೆ ಸಂಬಂಧಿಸಿದರೆ, ಆರನೆಯದು ಆ ವಸ್ತುವನ್ನು ಅಳವಡಿಸಿಕೊಂಡು ವಿಶಿಷ್ಟ ರೂಪ ಪಡೆದು ನಿಂತ ಕಥಾ ಶಿಲ್ಪಕ್ಕೆ ಸಂಬಂಧಿಸಿದೆ. ಇಲ್ಲಿ ಘಟನೆ, ಪಾತ್ರ, ಭಾಷೆ, ತಂತ್ರ ಇತ್ಯಾದಿಗಳೆಲ್ಲ ಮೇಳವಿಸಿ ಒಂದು ಕಥೆ ಹೇಗೆ ರಾಚನಿಕ ಸ್ವರೂಪವನ್ನು ಪಡೆಯುತ್ತದೆ ಎಂಬುದನ್ನು ತಿಳಿಸುತ್ತಾರೆ.

ಮಹಿಳಾ ಕಥಾ ಸಾಹಿತ್ಯದ ವೈಶಿಷ್ಟ್ಯಗಳನ್ನು ತಿಳಿಸುವುದು ಎಂಟನೆಯ ಅಧ್ಯಾಯವಾಗಿದೆ. ಏಳು ಮತ್ತು ಒಂಬತ್ತನೆಯ ಅಧ್ಯಾಯಗಳಲ್ಲಿ ಮಹಿಳೆಯರ ಕಥೆಗಳಿಗಿರುವ ಮಿತಿ ಮತ್ತು ಸಾಧ್ಯತೆಗಳನ್ನು ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ ನಡೆದಿದೆ. ಮಹಿಳೆ ಬೆಳೆದು ಬಂದ ಪರಿಸರ, ವಾತಾವರಣ, ಸಾಹಿತ್ಯಕ್ಕೆ ಒದಗಿದ ಮಿತಿಗಳನ್ನು ಮಲ್ಲಿಕಾ ಘಂಟಿ ನಿಚ್ಚಳವಾಗಿ ತೆರೆದಿಟ್ಟಿದ್ದಾರೆ.

ಹತ್ತನೆಯ ಅಧ್ಯಾಯವು ಪ್ರಬಂಧದ ಸಾರ ಸಂಗ್ರಹವಾಗಿದೆ. ಇಲ್ಲಿ ಮಹಿಳೆಯರು ಕಥಾಸಾಹಿತ್ಯಕ್ಕೆ ಕೊಟ್ಟ ಕೊಡುಗೆ, ಪಡೆದ ಪ್ರಶಸ್ತಿ, ಕೀರ್ತಿ, ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರು ಪಡೆದ ಸ್ಥಾನಮಾನಗಳನ್ನು ನಿರ್ದೇಶಿಸಲಾಗಿದೆ.

ಹೀಗೆ ಮಲ್ಲಿಕಾ ಘಂಟಿಯವರು ಮಹಿಳಾ ಕಥಾಸಾಹಿತ್ಯದ ನೆಲೆ–ಬೆಲೆಗಳನ್ನು ವಸ್ತುನಿಷ್ಠವಾಗಿ ಗುರ್ತಿಸುವ ಮೂಲಕ ಆಸಕ್ತಿಯಿಂದ ಅಧ್ಯಯನ ನಡೆಸಿ ಯಶಸ್ವಿಯಾಗಿದ್ದಾರೆ. "ಬರವಣಿಗೆಯಲ್ಲಿ ಉತ್ಪ್ರೇಕ್ಷೆಗೆ ಅವಕಾಶ ಕೊಡದೆ, ನಿಷ್ಪಕ್ಷಪಾತ ದೃಷ್ಟಿಯಿಂದ ಕಥೆಗಳನ್ನು ವಿಮರ್ಶಿಸಿದ್ದಾರೆ. ಅವರ ಅಧ್ಯಯನದ ವ್ಯಾಪ್ತಿ, ವಿಷಯ ಸಂಗ್ರಹದಲ್ಲಿ ತೋರಿದ ಶ್ರದ್ಧೆ, ಶ್ರಮ, ವಿಶೇಷ ಆಸಕ್ತಿ, ಜೋಡಣೆಯಲ್ಲಿ ವಹಿಸಿದ ಜಾಗರೂಕತೆ, ವಿಮರ್ಶೆ, ವಿಶ್ಲೇಷಣೆಯಲ್ಲಿ ಪ್ರಕಟಿಸಿದ ನ್ಯಾಯ ನಿಷ್ಠುರತೆ; ವೈಚಾರಿಕತೆ, ಭಾಷೆಯ ಬಳಕೆಯಲ್ಲಿ, ನಿರೂಪಣಾ ವಿಧಾನದಲ್ಲಿ ಅನುಸರಿಸಿದ ನೇರತೆ, ನಿರ್ದುಷ್ಟತೆ ಇವೆಲ್ಲ ಪ್ರಬಂಧದ ಸಮಷ್ಟಿ ಪರಿಣಾಮಕ್ಕೆ ಸಹಕಾರಿಯಾಗಿ, ಇದೊಂದು ಉತ್ತಮ ಪ್ರಬಂಧವೆನಿಸಿಕೊಂಡಿದೆ"[೬] ಎಂದು ವೀರಣ್ಣ ರಾಜೂರ ಅವರು ಈ ಪ್ರಬಂಧವನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಮಲ್ಲಿಕಾ ಘಂಟಿಯವರ ಈ ಸಂಶೋಧನಾ ಮಹಾಪ್ರಬಂಧವನ್ನು ಕುರಿತು ಎಂ.ಎಂ.ಕಲಬುರ್ಗಿ ಅವರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ. ಅದೇನೆಂದರೆ "ಆಧುನಿಕ ಮಹಿಳಾ ಕಥಾಸಾಹಿತ್ಯ ಚರಿತ್ರೆಯ ಸ್ವರೂಪ ಈ ಕೃತಿಗೆ ಪ್ರಾಪ್ತವಾಗುವುದು ಒಂದು ವಿಶೇಷವೆಂದೇ ಹೇಳಬೇಕು"[೭] ಎನ್ನುತ್ತಾರೆ.

ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಪ್ರೊ. ಬಿ.ರಾಮಚಂದ್ರರಾವ್ ಅವರು "ಆಧುನಿಕ ಕನ್ನಡ ಸಾಹಿತ್ಯ ಮತ್ತು ಮಹಿಳೆಯರಿಗೆ ಇರುವ ಸಂಬಂಧ ಕಥಾಪ್ರಕಾರಕ್ಕೆ ಅವರ ಕೊಡುಗೆ, ಅದರ ಇತಿಮಿತಿಗಳು ಮತ್ತು ಸಾಧ್ಯತೆಗಳನ್ನು ವಿಶಿಷ್ಟವಾಗಿ ವಿವೇಚಿಸಿರುವ ಈ ಪ್ರಬಂಧ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವಲ್ಲಿ ಒಂದು ಉಪಯುಕ್ತ ಆಕರ ಗ್ರಂಥವಾಗಿ ನಿಲ್ಲುತ್ತದೆ"[೮] ಎಂದು ಈ ಕೃತಿಯನ್ನು ಕುರಿತು ತಮ್ಮ ಅಭಿಪ್ರಾಯವನ್ನು ತಿಳಿಸುತ್ತಾರೆ.

ಒಟ್ಟಾರೆ ಈ ಪ್ರಬಂಧವು ಕೊಡಗಿನ ಗೌರಮ್ಮನಿಂದ ಹಿಡಿದು ಒಟ್ಟು ಅರವತ್ತೈದು ವರ್ಷ ವ್ಯಾಪ್ತಿಯ ಮಹಿಳಾ ಕಥಾಜಗತ್ತಿನ ಅಧ್ಯಯನ ಈ ಕೃತಿಯ ವಸ್ತುವಾಗಿದೆ. ಪ್ರಾತಿನಿಧಿಕವೆನಿಸುವ ಐವತ್ತು ಜನ ಕತೆಗಾರ್ತಿಯರ ಒಂದು ನೂರಾ ಇಪ್ಪತ್ತನಾಲ್ಕು ಸಂಕಲನಗಳಲ್ಲಿ ವಿಕಾಸಗೊಂಡ ಸ್ತ್ರೀ ಕಥಾಶಕ್ತಿಯ ಆಕೃತಿ, ಆಶಯಗಳ ವಿಶೇಷ ಚಿತ್ರಣ ಇಲ್ಲಿದೆ. ದಿಟ್ಟ ಧೋರಣೆಯೊಂದಿಗೆ ಈ ಕೃತಿಯಲ್ಲಿ ಅನೇಕ ಒಳನೋಟಗಳಿವೆ.

ಹೀಗೆ ಮಲ್ಲಿಕಾ ಘಂಟಿಯವರು ವಿಮರ್ಶೆ, ಸಂಪಾದನೆ ಮತ್ತು ಸಾಮಾಜಿಕ ಸಂಶೋಧನೆ ಮುಂತಾದ ಕ್ಷೇತ್ರಗಳಲ್ಲಿ ವಿಶಿಷ್ಟವಾದ ಕಾರ್ಯನಿರ್ವಹಿಸಿ ಕನ್ನಡ ಸಾಹಿತ್ಯಕ್ಕೆ ಅನೇಕ ಮೌಲಿಕ ಗ್ರಂಥಗಳನ್ನು ಕೊಡುಗೆಯಾಗಿ ನೀಡಿದ್ದಾರೆ.

## ಕೊನೆಟಿಪ್ಪಣಿಗಳು

೧. ತನು ಕರಗದವರಲ್ಲಿ, ೨೦೦೦, ಪು. ೪

೨. ಅದೇ., ಪು. ೨೭

೩. ಅದೇ., ಪು. ೧

೪. ಧರಣಿಯ ಮೇಲೊಂದು, ೨೦೦೫, ಪು. ೧

೫. ತನುವ ನೇಗಿಲ ಮಾಡಿ, ೨೦೦೦, ಪು. ೪

೬. ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ, ೧೯೯೪, ಮುನ್ನುಡಿ, ಪು. ೯

೭. ಅದೇ., ಬೆನ್ನುಡಿ

೮. ಅದೇ.,

# ಅಧ್ಯಾಯ ಆರು

## ಸಮಾರೋಪ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹಲವಾರು ಜನ ಮಹಿಳೆಯರು ಬರಹದಲ್ಲಿ ತೊಡಗಿದ್ದಾರೆ. ಸ್ಪಷ್ಟವಾಗಿ ಚಳವಳಿ, ಪಂಥಗಳ ಪರಿಧಿಯಲ್ಲಿ ಹೆಜ್ಜೆ ಹಾಕುವುದಾಗದಿದ್ದರೂ ಇವರು ಅಂದಂದಿನ ಸಂದರ್ಭದಲ್ಲಿ ತಮ್ಮ ಸಾಮಾಜಿಕ ಪ್ರಜ್ಞೆಯನ್ನು ಪ್ರಕಟಿಸಿದ್ದಾರೆ. ತಿರುಮಲಾಂಬಾ, ಕೊಡಗಿನ ಗೌರಮ್ಮ, ಎಚ್.ವಿ.ಸಾವಿತ್ರಮ್ಮ, ಆರ್.ಕಲ್ಯಾಣಮ್ಮ, ಟಿ.ಸುನಂದಮ್ಮ, ತ್ರಿವೇಣಿ, ಅನುಪಮಾ ನಿರಂಜನ, ಗೀತಾ ನಾಗಭೂಷಣ, ಸವಿತಾ ನಾಗಭೂಷಣ ಇವರ ಬರಹಗಳು ಸ್ತ್ರೀ ಪುರುಷ ಸಂಬಂಧಗಳ ಬಗ್ಗೆ ವ್ಯವಸ್ಥೆಯ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಗುರ್ತಿಸುತ್ತೇವೆ.

ಇದೇ ದಿಕ್ಕಿನಲ್ಲಿ ಚಿಂತಿಸುವ, ಬರೆಯುವ, ಬದುಕುತ್ತಿರುವ ಲೇಖಕಿ ಮಲ್ಲಿಕಾ ಘಂಟಿ. ಇವರು ಲಿಂಗಾಧಾರಿತ ಅಸಮಾನತೆಯ ನೆಲೆಯಲ್ಲಿರುವ ಸಾಮಾಜಿಕ ಸಮಸ್ಯೆಗಳನ್ನು ಆಯ್ಕೆ ಮಾಡಿಕೊಂಡು ಸ್ತ್ರೀ ಪರತೆಯನ್ನು ವೈಚಾರಿಕ ಚಿಂತನೆಯಲ್ಲಿ ಎತ್ತಿಹಿಡಿಯುವ ವಿಶಿಷ್ಟ ಬರಹಗಾರರು. ಇವರು ತಮ್ಮ ಕವನ, ನಾಟಕ, ವಿಮರ್ಶೆ ಮೊದಲಾದ ಕ್ಷೇತ್ರಗಳಲ್ಲಿ ಬಂಡಾಯ ಮನೋಧರ್ಮದಿಂದ ದುಡಿಯುತ್ತಿರುವವರು ತಮ್ಮ ಆಸಕ್ತಿಗೆ ಅನುಗುಣವಾದ ವಸ್ತುವನ್ನು ಆಯ್ಕೆ ಮಾಡಿಕೊಂಡು ಅದನ್ನು ಸಮರ್ಪಕವಾಗಿ ನಿರ್ವಹಿಸುವಲ್ಲಿ ವಿಶೇಷ ಕಾಳಜಿ ವಹಿಸಿ ತಮ್ಮ ಕೌಶಲವನ್ನು ಮೆರೆದಿದ್ದಾರೆ.

ಸಮಕಾಲೀನ ಹಾಗೂ ಪ್ರಸ್ತುತದ ಹಲವು ನಿಜಗಳಿಗೆ ಮೈಕೊಡುವ ಮಲ್ಲಿಕಾ ಘಂಟಿ ಅವರ ಸಂವೇದನೆಯ ಆರೋಗ್ಯಪೂರ್ಣ ಆಶಯವನ್ನು ಕೆಲವು ಹೊಸ ಪರಿಕಲ್ಪನೆಗಳ ಅಡಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಈ ನಿಬಂಧದ ಮೂಲಕ ಆಗಿದೆ. ಈ ಹೊತ್ತಿನಲ್ಲಿ ಜಾಗತಿಕವಾಗಿ ತಲೆದೋರಿರುವ ಹೊಸ ಬಗೆಯ ಸಮಸ್ಯೆಗಳಿಗೆ ಮುಖಾಮುಖಿಯಾಗುವ, ಪರಿಹಾರಗಳನ್ನು ಶೋಧಿಸುವ ನೆಲೆಗಳನ್ನು ವಿಶೇಷವಾಗಿ ಪರೀಕ್ಷಿಸಲಾಗಿದೆ. ವೈಜ್ಞಾನಿಕ ಹಾಗೂ ವೈಚಾರಿಕತೆಯ ಬೆಳಕಿನಲ್ಲಿ ಸಮಕಾಲೀನ ಆಗುಹೋಗುಗಳನ್ನು ಜೀವಂತವಾಗಿರಿಸಿರುವ ಇವರ ಸಾಹಿತ್ಯವನ್ನು ಕುರಿತು ಅಧ್ಯಯನ ನಡೆಸಿರುವ ಪುಟ್ಟ ಪ್ರಯತ್ನ ಈ ನಿಬಂಧದ ರಚನೆಯ ಮೂಲಕ ಸಾಧ್ಯವಾಗಿದೆ.

ಪ್ರಸ್ತುತ ನಿಬಂಧದ ಶೀರ್ಷಿಕೆ **"ಡಾ. ಮಲ್ಲಿಕಾ ಘಂಟಿ ಅವರ ಬದುಕು ಹಾಗೂ ಸಾಹಿತ್ಯ"** ಎಂಬುದಾಗಿದೆ. ಇದು ಸಮಾರೋಪವನ್ನು ಒಳಗೊಂಡಂತೆ ಮುಖ್ಯವಾಗಿ ಆರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ. ಕನ್ನಡ ಸಾಹಿತ್ಯದ ಸಾಮಾಜಿಕ ಪ್ರಜ್ಞೆಯ ವಿಕಾಸದ

ಯಾದಿಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು, ಮಲ್ಲಿಕಾ ಘಂಟಿಯವರ ಸಾಹಿತ್ಯದಲ್ಲಿ ಅನಾವರಣಗೊಂಡಿರುವ ಬಂಡಾಯ ಪ್ರಜ್ಞೆಯ ಮುಖ್ಯ ನೆಲೆಗಳನ್ನು ಶೋಧಿಸಲು ಪ್ರಯತ್ನಿಸಿದೆ. ಮುಖ್ಯವಾಗಿ ಅವರ ಸಾಹಿತ್ಯ ಸಂವೇದನೆಯ ವಿವಿಧ ನೆಲೆಗಳನ್ನು ಹೊಸ ಸಾಧ್ಯತೆಗಳೊಂದಿಗೆ ಚರ್ಚಿಸಲಾಗಿದೆ. ಈ ಮೂಲಕ ಮಲ್ಲಿಕಾ ಘಂಟಿಯವರ ಸಾಹಿತ್ಯದ ಚಾರಿತ್ರಿಕ ಮಹತ್ವವನ್ನು ಗುರುತಿಸುವ, ಸಾಹಿತ್ಯ ಚಿಂತನೆಯನ್ನು ಮೌಲ್ಯೀಕರಿಸುವ, ಅದಕ್ಕೆ ಕನ್ನಡ ಪರಂಪರೆಯಲ್ಲಿ ಒಂದು ವಿಶೇಷ ಸ್ಥಾನವನ್ನು ಕಲ್ಪಿಸುವ ದಿಕ್ಕಿನಲ್ಲಿ ಈ ಅಧ್ಯಯನವು ನಡೆದಿದೆ.

ಮಲ್ಲಿಕಾ ಘಂಟಿಯವರ ಸಾಹಿತ್ಯವನ್ನು ಸಂಶೋಧನೆಗೊಳಪಡಿಸಿದ ಪ್ರಸ್ತುತ ನಿಬಂಧದ ವಸ್ತು ವಿನ್ಯಾಸವನ್ನು ಹೀಗೆ ಪರಿಚಯಿಸಬಹುದು:

ಈ ನಿಬಂಧದ ಮೊದಲನೆಯ ಅಧ್ಯಾಯವು 'ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ'ವನ್ನು ನಿರ್ದಿಷ್ಟವಾಗಿ ತಿಳಿಸಿದೆ. ಇದರಲ್ಲಿ ಸಾಹಿತ್ಯ, ಕನ್ನಡ ಸಾಹಿತ್ಯ, ಆಧುನಿಕ ಕನ್ನಡ ಸಾಹಿತ್ಯ, ದಲಿತ–ಬಂಡಾಯ ಸಾಹಿತ್ಯ, ಸಾಹಿತ್ಯದಲ್ಲಿ ಮಹಿಳೆ, ಸ್ತ್ರೀವಾದಿ ಸಾಹಿತ್ಯ ಇವುಗಳ ಸ್ಥೂಲ ನೋಟವಿದೆ. ಇವುಗಳ ಹಿನ್ನೆಲೆಯಲ್ಲಿ ಇಪ್ಪತ್ತನೆಯ ಶತಮಾನದ ಕೊನೆಯ ದಶಕದ ಸಾಹಿತ್ಯದಲ್ಲಿ ಗಟ್ಟಿ ಧ್ವನಿ ಮಾಡುತ್ತಿರುವ ಮಲ್ಲಿಕಾ ಘಂಟಿ ಅವರ ಬದುಕು–ಬರಹವನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಎರಡನೆಯ ಅಧ್ಯಾಯ **"ಮಲ್ಲಿಕಾ ಘಂಟಿ ಅವರ ಬದುಕಿನ ಹಿನ್ನೋಟ : ಪರಿಚಯ"**ದಲ್ಲಿ ಘಂಟಿಯವರ ಜನನ, ತಂದೆ, ತಾಯಿ, ವಿದ್ಯಾಭ್ಯಾಸ, ಬಾಲ್ಯದ ನೆನಪುಗಳು, ವ್ಯಕ್ತಿಯಾಗಿ ಅವರು ಬೆಳೆದ ಪರಿಸರ, ಸಾಮಾಜಿಕ ಕಾಳಜಿ, ಪ್ರಾಧ್ಯಾಪಕಿಯಾಗಿ ಅನುಭವ, ಜೀವನದಲ್ಲಿ ಮಹಿಳಾ ಪರ ಹೊಂದಿದ ಕಾಳಜಿಗಳು, ಆಲೋಚನೆಗಳು, ಮಹಿಳಾ ಚಳವಳಿ, ಪ್ರತಿಭಟನೆಯಿಂದ ಅವರ ಸ್ತ್ರೀ ವಿಮೋಚನೆಯ ಚಿಂತನೆಗಳು, ಲೇಖಕಿಯಾಗಿ ಬರಹಕ್ಕೆ ತೊಡಗಲು ಕಾರಣ ಸ್ನೇಹಪರ ವ್ಯಕ್ತಿತ್ವದಿಂದ ಅಧ್ಯಾಪಕಿಯಾಗಿ ಗಳಿಸಿದ ಆಪ್ತರು, ಶಿಷ್ಯರು ಇವರ ಪ್ರೀತ್ಯಾದಾರ, ಸಾಹಿತ್ಯದಲ್ಲಿ ಸಾಹಿತ್ಯದ ವಿಭಿನ್ನ ಆಯಾಮಗಳಲ್ಲಿ ಯಶಸ್ವಿಯಾದ ಬಗೆ, ಈಗ ಕರ್ತವ್ಯ ನಿರ್ವಹಿಸುತ್ತಿರುವ ವಿಶ್ವವಿದ್ಯಾನಿಲಯದ ಕುಲಸಚಿವರ ಹುದ್ದೆಯ ಜವಾಬ್ದಾರಿಯುತ ಕಾರ್ಯಗಳು, ಪ್ರಗತಿಶೀಲ ಕುಲಸಚಿವರಾಗಿ ಮಾಡಿದ ಮಹತ್ವದ ಕೆಲಸ – ಇವುಗಳ ಜೊತೆಗೆ ಕುಟುಂಬದ ಜೊತೆ ಕಳೆದ ಕ್ಷಣಗಳು ಈ ಎಲ್ಲಾ ಅಂಶಗಳು ಕುರಿತ ಅಧ್ಯಯನವನ್ನು ಈ ಅಧ್ಯಾಯವು ಸ್ಪರ್ಶಿಸಿದೆ.

ಈ ಪ್ರಬಂಧದ ಹೃದಯಭಾಗವಾದ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳು ಈ ಪ್ರಬಂಧದಲ್ಲಿಯೇ ಹೆಚ್ಚು ನಿಡಿದಾದ ಭಾಗ. ಇಲ್ಲಿ ಸಾಹಿತ್ಯ ಪರಂಪರೆ, ಬಂಡಾಯ ಸಾಹಿತ್ಯ,

ಎಪ್ಪತ್ತರ ದಶಕ, ಮಾರ್ಕ್ಸ್‌ವಾದ, ಅಂಬೇಡ್ಕರ್‌ವಾದ, ಲೋಹಿಯಾವಾದ, ಮಹಿಳೆ, ಮಹಿಳಾ ಹೋರಾಟ ಅಭಿವ್ಯಕ್ತಿಯನ್ನು ಚರ್ಚಿಸಿದೆ. ಮೂಲತಃ ಹೋರಾಟಗಾರ್ತಿಯಾದ ಮಲ್ಲಿಕಾ ಘಂಟಿ ಇವರ ಸೃಜನಶೀಲ ಕೃತಿಗಳು, ಪ್ರೇರಣೆ, ಕಾವ್ಯ, ನಾಟಕ ಇವುಗಳ ದೃಷ್ಟಿ, ಧೋರಣೆ ಮತ್ತು ಅದರ ಧ್ಯೇಯೋದ್ದೇಶಗಳನ್ನು ಪ್ರತ್ಯೇಕ ಶೀರ್ಷಿಕೆಯಡಿಯಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಅಲ್ಲದೆ ಮಲ್ಲಿಕಾ ಘಂಟಿಯವರ ಸೃಜನೇತರ ರಚನೆಗಳಾದ ಜೀವನ ಚರಿತ್ರೆ, ಅದರ ಚರಿತ್ರೆ, ಸ್ವರೂಪ, ಲಕ್ಷಣ, ಮಹತ್ವ, ಕನ್ನಡದಲ್ಲಿ ಬಂದಿರುವ ಜೀವನ ಚರಿತ್ರೆಗಳು, ಮಲ್ಲಿಕಾ ಘಂಟಿಯವರ ಜೀವನ ಚರಿತ್ರೆಗಳು, ಇವರ ಒಟ್ಟು ಜೀವನ ಚರಿತ್ರೆಗಳ ಕೇಂದ್ರ ಪ್ರಜ್ಞೆ ಇವುಗಳನ್ನು ಕುರಿತು ಒಟ್ಟಾಗಿ ವರ್ತಮಾನದ ನೆಲೆಯಲ್ಲಿ ಇಟ್ಟು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯವು ಮಲ್ಲಿಕಾ ಘಂಟಿಯವರ ವಿಮರ್ಶಾ ಕೃತಿಗಳು, ಸಂಪಾದಿತ ಕೃತಿಗಳು, ಪಿಎಚ್.ಡಿ ಸಂಶೋಧನಾ ಮಹಾಪ್ರಬಂಧಗಳನ್ನು ವಿಮರ್ಶಕಿಯಾಗಿ, ಸಂಪಾದಕಿಯಾಗಿ, ಸಂಶೋಧಕಿಯಾಗಿ ಇತರೆ ಸಾಹಿತ್ಯದ ಒಟ್ಟು ನೋಟವನ್ನು ಒಳಗೊಂಡಂತೆ ಘಂಟಿಯವರ ಪೂರ್ಣ ಸಾಹಿತ್ಯದ ಅಧ್ಯಯನವನ್ನು ಮಾಡಲಾಗಿದೆ.

ಕೊನೆಯ ಅಧ್ಯಾಯ ಒಟ್ಟು ನಿಬಂಧದ ಸಾರ ಸಂಗ್ರಹವಾಗಿದೆ. ಇದು ಮಲ್ಲಿಕಾ ಘಂಟಿಯವರ ಒಟ್ಟು ಸಾಹಿತ್ಯವನ್ನು ಮೌಲ್ಯಮಾಪನ ಮಾಡುವ ಉದ್ದೇಶದಿಂದ ಕೂಡಿದ್ದಾಗಿದೆ. ಇವರ ಸಾಮಾಜಿಕ ಚಿಂತನೆಯ ಬಹುರೂಪಗಳನ್ನು ವಸ್ತುನಿಷ್ಠವಾಗಿ ಪರಿಶೀಲಿಸಲಾಗಿದೆ.

**ಅಧ್ಯಯನದ ಪ್ರಧಾನ ನೆಲೆಗಳು ಮತ್ತು ಫಲಿತಗಳು**

ಪ್ರಸ್ತುತ ನಿಬಂಧದ ಅಧ್ಯಯನದ ಕೆಲವು ತಾತ್ವಿಕ ನೆಲೆಗಳು ಮತ್ತು ಅಧ್ಯಯನದಿಂದ ಕಂಡುಕೊಂಡ ಫಲಿತಾಂಶಗಳನ್ನು ಈ ಕೆಳಕಾಣಿಸಿದಂತೆ ಸ್ಥೂಲವಾಗಿ ಪಟ್ಟಿ ಮಾಡಬಹುದು.

೧. ಬರೆಯುವುದನ್ನು ಒಂದು ಜವಾಬ್ದಾರಿಯುತ ಕಾಯಕವೆಂದು ಕೊಂಡಿರುವವರು ಮಲ್ಲಿಕಾ ಘಂಟಿ. ಅವರು ಸಾಮಾಜಿಕ ಒತ್ತಡ ತೀವ್ರಗೊಂಡಾಗ ಬರೆದು ತೀವ್ರಗತಿಯಲ್ಲಿ ಬದುಕಿಗೆ ಚಾಚಿಕೊಳ್ಳುವವರು ಹಾಗೂ ಇವರ ಸಾಹಿತ್ಯದಲ್ಲಿ 'ಕಲೆಗಾಗಿ ಕಲೆಯಲ್ಲ, ಬದಲಿಗೆ ಬದುಕಿಗಾಗಿ ಕಲೆ' ಎಂಬುದನ್ನು ಪ್ರತಿಪಾದಿಸುತ್ತಾರೆ. ಇದನ್ನು ಇವರ ಈ ಅಧ್ಯಯನದಲ್ಲಿ ಹಲವು ನಿದರ್ಶನಗಳ ಮೂಲಕ ಕಾಣಬಹುದು.

೨. ಇವರದು 'ಸುಧಾರಣವಾದವನ್ನು ನಂಬದೇ ಬದಲಾವಣಾವಾದವನ್ನು ನಂಬುವಂಥಹ ವ್ಯಕ್ತಿತ್ವ'. ಇವರು ವ್ಯವಸ್ಥಾ ವಿರೋಧಿ ಸಾಹಿತ್ಯ ರಚನೆ ಮಾಡುವವರು. ಇವರ ಸಾಹಿತ್ಯ ಓದುಗರನ್ನು ಗಾಢ ಚಿಂತನೆಗೆ ತೊಡಗಿಸುವಲ್ಲಿ ಸಫಲವಾಗುತ್ತವೆ. ಬದುಕಿನ

ತೀವ್ರತೆ, ಪ್ರೀತಿ, ಮತ್ತು ವಿಷಾದಗಳ ಛಾಯೆಯನ್ನು ಮನದಲ್ಲಿ ಮೂಡಿಸಿ ಬಿಡುತ್ತದೆ. ಕೊನೆಗೆ ವಾಸ್ತವದ ಅಂಗಳಕ್ಕೆ ತಂದು ನಿಲ್ಲಿಸುತ್ತವೆ. ಹಸಿವಿನ ಅನಿವಾರ್ಯತೆಯನ್ನು ಮತ್ತು ಪ್ರೀತಿಯ ಸಾರ್ಥಕತೆಯನ್ನು ಅರಿಯುವಂತೆ ಮಾಡುತ್ತವೆ.

೩. 'ಸಮಾಜವಾದದ ನಿಲುವು' ಪ್ರಸ್ತುತ ಅಧ್ಯಯನದ ಒಂದು ಮುಖ್ಯ ತಾತ್ವಿಕ ನೆಲೆ. ಕೋಮುವಾದದಂತಹ ಸಾಮಾಜಿಕ ವಿಷಯಗಳ ಬಗ್ಗೆ ವಿಶಾಲವಾದ ಎಡಪಂಥೀಯವೆನ್ನಬಹುದಾದ ದೃಷ್ಟಿಕೋನದಿಂದ ಬರೆಯುವ ಇವರ ಸಾಹಿತ್ಯವನ್ನು ಲೇಖಕರ ಚಿಂತನೆಗಳ ಅಧ್ಯಯನಗಳ ಮೂಲಕ ತೆರೆದು ತೋರಿಸಿದೆ.

೪. ಸ್ತ್ರೀ ಸಂವೇದನೆಯನ್ನು ಗುರುತಿಸುವ ನೆಲೆಯಲ್ಲಿ ಈ ಅಧ್ಯಯನ ಸಾಗಿದೆ. "ಹೆಣ್ಣು ಅಬಲೆಯಲ್ಲಿ ಸಂಪೂರ್ಣ ಸಬಲೆ" ಎಂಬ ಗ್ರಹಿಕೆಯ ಹಿನ್ನಲೆಯಲ್ಲಿ ಈ ಅಧ್ಯಯನ ನಡೆದಿದೆ. ಕಳೆದ ಎರಡು ಮೂರು ದಶಕದ ಅತ್ಯಂತ ಶಕ್ತ, ಬಲಿಷ್ಠ ಹಾಗೂ ಬುದ್ಧಿಮತೆಯುಳ್ಳವಳು ಸ್ತ್ರೀ ಎಂಬುದನ್ನು ಪ್ರಸ್ತುತ ಅಧ್ಯಯನವು ಗುರುತಿಸಿದೆ.

೫. ವಿಶೇಷವಾಗಿ ಗುರುತಿಸಿದ್ದೇನೆಂದರೆ 'ಬಂಡಾಯ ಪ್ರಜ್ಞೆ' ಇವರ ಬರಹಗಳು ಬಂಡಾಯ ಧ್ವನಿಯ ಪ್ರಾತಿನಿಧಿಕ ರೂಪಗಳು. ಇವುಗಳಲ್ಲಿ ಮುಖ್ಯವಾಗಿ ಗಮನಸೆಳೆಯುವುದೆಂದರೆ ಈ ಬರಹಗಳ ಶೈಲಿ. ಸಾಹಿತ್ಯ, ವಿಮರ್ಶೆಯ ಪಂಡಿತಶೈಲಿಯನ್ನು ಬಿಟ್ಟು ಮಲ್ಲಿಕಾ ಅವರು ತಮ್ಮದೇ ಆದ ವಿಶಿಷ್ಟ ಜನಪದೀಯ ಶೈಲಿಯನ್ನು ರೂಢಿಸಿಕೊಂಡಿದ್ದುನ್ನು ಇಲ್ಲಿನ ಅಧ್ಯಯನದಲ್ಲಿ ತಿಳಿಯಲಾಗಿದೆ.

೬. ಎಲ್ಲಕ್ಕಿಂತ ಮುಖ್ಯವಾಗಿ, ಜೀವಸಮಾನತೆಯ ನೆಲೆಯಲ್ಲಿ ಅವರು ಸಾಗಿರುವ ದೂರವನ್ನು ಆ ದಿಕ್ಕಿನ ಪಯಣದಲ್ಲಿ ಎದುರಾದ ಸವಾಲು-ಸಂದಿಗ್ಧತೆಗಳನ್ನು, ಅದನ್ನು ಮುಖಾಮುಖಿಯಾಗಿಸುವ ನಿಟ್ಟಿನಲ್ಲಿ ಸೃಷ್ಟಿಯಾದ ಪ್ರತಿರೋಧ ಚಿಂತನೆಯನ್ನು ಪ್ರಸ್ತುತ ಅಧ್ಯಯನದಲ್ಲಿ ವಸ್ತುನಿಷ್ಠವಾಗಿ ಶೋಧಿಸಲು ಪ್ರಯತ್ನಿಸಿದೆ.

ಇದಲ್ಲದೆ ಈ ನಿಬಂಧವು ನಿಸರ್ಗತತ್ವ, ಜೀವನಶ್ರದ್ಧೆ, ಜಾಗತಿಕ ಪ್ರಜ್ಞೆ ಮುಂತಾದ ನೆಲೆಗಳಿಂದ ಮಲ್ಲಿಕಾ ಘಂಟಿಯವರ ಸಾಹಿತ್ಯವನ್ನು ಅಧ್ಯಯನ ನಡೆಸಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ಮಲ್ಲಿಕಾ ಘಂಟಿ ಅವರ ಸಾಹಿತ್ಯ ಚಿರಂತನವಾದದ್ದು, ಇವರ ಸಾಹಿತ್ಯ ಸ್ತ್ರೀ ಬದುಕಿನ ಆಳ-ಅಗಲಗಳನ್ನು ಕಟ್ಟಿಕೊಡುತ್ತದೆ. ಮಹಿಳೆಯ ಅಂತರಂಗದ ಅರಿವನ್ನಷ್ಟೇ ಕೇವಲ ಅನಾವರಣಗೊಳಿಸದೇ ಇಡೀ ಸ್ತ್ರೀವಾದಿ ಪ್ರಜ್ಞೆ, ಬಂಡಾಯ ಪ್ರಜ್ಞೆ – ಇವುಗಳನ್ನು ಕುರಿತು ಚಿಂತಿಸಿದೆ.

ಇವರ ಸಾಹಿತ್ಯ 'ಪ್ರತಿರೋಧದ ಚೈತನ್ಯ ಗಂಗೆ'. ಇವರು ತಮ್ಮ ಕಾವ್ಯ–ನಾಟಕಗಳಲ್ಲಿ ಬಳಸಿರುವ ಪ್ರತಿಮೆ–ರೂಪಕಗಳನ್ನು ಕುರಿತಂತೆ ವಸ್ತು ವಿನ್ಯಾಸದ ಬಗ್ಗೆ ಸಂಶೋಧನೆ ಕೈಗೊಳ್ಳಲು ಸಾಕಷ್ಟು ಅವಕಾಶಗಳಿವೆ. ಲಿಂಗಾಧಾರಿತ ಅಸಮಾನತೆಯ ನೆಲೆಯಲ್ಲಿರುವ ಸಾಮಾಜಿಕ ಸಮಸ್ಯೆಗಳನ್ನು ಆಯ್ಕೆ ಮಾಡಿಕೊಂಡು ಸ್ತ್ರೀಪರತೆಯನ್ನು ವೈಚಾರಿಕ ನೆಲೆಯಲ್ಲಿ ಎತ್ತಿಹಿಡಿಯುವ ಮಲ್ಲಿಕಾ ಘಂಟಿ ವಿಶ್ವವಿದ್ಯಾನಿಲಯದ ಕುಲಸಚಿವದ ಉನ್ನತ ಹುದ್ದೆಗೆ ಏರಿದ್ದು, ಹಂತಹಂತವಾಗಿ ಅವರ ಪರಿಶ್ರಮ, ಸತ್ಯಸಂಧತೆ, ಪ್ರಾಮಾಣಿಕತೆ ಅವರನ್ನು ತನ್ನ ವಂಶದಲ್ಲಿ ಅಪೂರ್ವವೆಂಬಂತೆ ಈ ಎತ್ತರಕ್ಕೆ ತಂದು ನಿಲ್ಲಿಸಿದೆ. ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ, ಅಧ್ಯಯನದ ಕಡೆಗೆ ಆಸಕ್ತಿ ತಳೆದು, ನೆರೆಹೊರೆ ಯವರಿಗಿಂತ ಭಿನ್ನವಾದ ದಾರಿ ತುಳಿದದ್ದೇ ಒಂದು ಕ್ರಾಂತಿ. ಇದೇ ಕ್ರಾಂತಿಕಾರಕ ಶ್ರದ್ಧೆ ಅವರನ್ನು ಹೊಸ ಮನುಷ್ಯಳನ್ನಾಗಿ ರೂಪಾಂತರಿಸಿದೆ.

ಮಲ್ಲಿಕಾ ಘಂಟಿಯವರು ವಿಚಾರ ಮಂಡನೆಗೆ ತಕ್ಕ ವಿಧಾನವನ್ನು ಭಾಷೆಯನ್ನು ರೂಢಿಸಿಕೊಂಡಿದ್ದಾರೆ. ಸಂದೇಹಗಳಿಲ್ಲದ ದಾರಿಯಲ್ಲಿ ಸಾಗುವ ಬಗೆ ಇವರಿಗೆ ಕರಗತವಾಗಿದೆ. ಎಲ್ಲಿಯೂ ಸೈದ್ಧಾಂತಿಕ ಬದ್ಧತೆಯನ್ನು ಬಿಟ್ಟುಕೊಡದ ಇವರು ಪ್ರಗತಿಪರ ಆಲೋಚನೆಗಳ ಮೂಲಕ ಗಂಭೀರ ವಿಷಯಗಳನ್ನು ಮಂಡಿಸಿದ್ದಾರೆ. ಸಾಮಾಜಿಕ ಅನ್ಯಾಯ, ಸ್ತ್ರೀ ಶೋಷಣೆ ಕಂಡುಬಂದಲ್ಲಿ ಗಟ್ಟಿ ಧ್ವನಿಯಲ್ಲಿ ಮಾತನಾಡುತ್ತಾರೆ ಪ್ರತಿಭಟಿಸುತ್ತಾರೆ.

ಒಟ್ಟಾರೆಯಾಗಿ, ಮಲ್ಲಿಕಾ ಘಂಟಿಯವರ ಬರಹ, ಚಿಂತನೆಗಳ ಅಧ್ಯಯನ ಬಹುಪ್ರಯತ್ನಗಳನ್ನು ಬಯಸುವಂತದ್ದು, ಹೆಚ್ಚಿನ ದುಡಿಮೆ ಬೇಡುವಂತದ್ದು. ಈ ದಿಕ್ಕಿನಲ್ಲಿ ಪ್ರಸ್ತುತ ಅಧ್ಯಯನ ಒಂದು ಆರಂಭಿಕ ಪ್ರಯತ್ನ ಎಂದು ಮಾತ್ರ ಹೇಳಬಹುದು.

## ಅನುಬಂಧ–೧

# ಆಕರ ಗ್ರಂಥಗಳು

### ಪ್ರಧಾನ ಆಕರಗಳು

೧. ಮಲ್ಲಿಕಾ ಘಂಟಿ : *ತುಳಿಯದಿರಿ ನನ್ನ*
ಯುವಲೋಕ ಪ್ರಕಾಶನ
ಗುಲ್ಬರ್ಗಾ

*ಈ ಹೆಣ್ಣುಗಳೆ ಹೀಗೆ*
ಯುವಲೋಕ ಪ್ರಕಾಶನ
ಗುಲ್ಬರ್ಗಾ, ೧೯೦೯

*ರೊಟ್ಟಿ ಮತ್ತು ಹುಡುಗಿ*
ಗೌತಮ ಪ್ರಕಾಶನ
ಬಳ್ಳಾರಿ, ೧೯೯೯

*ಬೆಲ್ಲದಚ್ಚು ಮತ್ತು ಇರುವೆ ದಂಡು*
ವಿಕಾಸ ಚಂದ್ರ ಪ್ರಕಾಶನ
ಬಳ್ಳಾರಿ, ೨೦೦೫

*ಚಾಜ*
ಯುವಲೋಕ ಪ್ರಕಾಶನ
ಗುಲ್ಬರ್ಗಾ, ೧೯೯೦

*ಚಾಜ*
ಗೌತಮ ಪ್ರಕಾಶನ(ರಿ)
ನಾಯಕರ ಬೀದಿ, ಬಳ್ಳಾರಿ
ಪರಿಷ್ಕೃತ ಮುದ್ರಣ, ೨೦೧೫

*ಒಂದು ಬಾವಿಯ ಸುತ್ತ*
ಅಪ್ರಕಟಿತ ನಾಟಕ

*ತನುಕರಗದವರಲ್ಲಿ*
ಗೌತಮ ಪ್ರಕಾಶನ
ಬಳ್ಳಾರಿ–೨೦೦೦

*ಧರಣಿಯ ಮೇಲೊಂದು*
ಗೌತಮ ಪ್ರಕಾಶನ
ಬಾಗಲಕೋಟೆ, ೨೦೦೫

*ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ*
(ಪಿಎಚ್.ಡಿ. ಮಹಾಪ್ರಬಂಧ)
ಯುವಲೋಕ ಪ್ರಕಾಶನ, ಶ್ರೀನಗರ
ಧಾರವಾಡ- ೧೯೯೪

*ಅಹಲ್ಯಾ ಬಾಯಿ ಹೋಳ್ಕರ್*
ಕರ್ನಾಟಕ ಸಾಹಿತ್ಯ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು

*ಬದುಕು ಭಾವಗೀತೆಯಲ್ಲ ಭಾಗ-೧*
ಅಪ್ರಕಟಿತ ಆತ್ಮಕತೆ

*ವೀರ ಸಂಗೊಳ್ಳಿರಾಯಣ್ಣ*
ಶ್ರೀ ಕಾಗಿನೆಲೆ ಮಹಾಸಂಸ್ಥಾನ ಕನಕ
ಗುರು ಪೀಠ
ರಾಯಚೂರು ಜಿಲ್ಲೆ, ೨೦೦೮

*ಮಹಾಸಾಧ್ವಿ ಇಟಗಿ ಭೀಮವ್ವ*
ಶ್ರೀ ಕಾಗಿನೆಲೆ ಮಹಾಸಂಸ್ಥಾನ ಕನಕ
ಗುರು ಪೀಠ
ರಾಯಚೂರು ಜಿಲ್ಲೆ, ೨೦೦೮

**ಸಂಪಾದನೆ:**

**ಮಲ್ಲಿಕಾ ಘಂಟಿ**
**ವೆಂಟಗಿರಿ ದಳವಾಯಿ** : *ತನುವ ನೇಗಿಲ ಮಾಡಿ (ಸಂ)*
ಶ್ರೀ ಕಾಗಿನೆಲೆ ಮಹಾ ಸಂಸ್ಥಾನ
ಕನಕಗುರು ಪೀಠ
ಸಿಂಧನೂರು ಜಿ.ರಾಯಚೂರು-
೨೦೦೪

**ಸಬಿಹಾ ಭೂಮಿಗೌಡ**
**ಮಲ್ಲಿಕಾ ಘಂಟಿ** : *ಕನ್ನಡ ಸಾಹಿತ್ಯ ಮತ್ತು ಮಹಿಳೆ(ಸಂ)*
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು-೨೦೦೬

ಅನುಬಂಧ-೨

## ಪರಾಮರ್ಶನ ಗ್ರಂಥಗಳು

೧ **ಅಕ್ಕಮಹಾದೇವಿ** : *ನಂಜನಗೂಡು ತಿರುಮಲಾಂಬ*
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ೨೦೦೯

೨ ಅರವಿಂದ ಮಾಲಗತ್ತಿ : *ದಲಿತ ಸಾಹಿತ್ಯ ಪರ್ವ*
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ೨೦೦೯

೩ ಬಂಜಗೆರೆ ಜಯಪ್ರಕಾಶ್ : *ಬಂಡಾಯ ಸಾಹಿತ್ಯ ಸಂದರ್ಭ ಮೀಮಾಂಸೆ*
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ೨೦೦೯

೪ ಬರಗೂರು ರಾಮಚಂದ್ರಪ್ಪ : *ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು*
ಕರ್ನಾಟಕ ಸಾಹಿತ್ಯ ಅಕಾಡೆಮಿ
ನೃಪತುಂಗ ರಸ್ತೆ
ಬೆಂಗಳೂರು, ೧೯೯೩.

*ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ*
ಕರ್ನಾಟಕ ಸಾಹಿತ್ಯ ಅಕಾಡೆಮಿ
ನೃಪತುಂಗ ರಸ್ತೆ
ಬೆಂಗಳೂರು, ೧೯೯೩

೫ ಭೈರವಮೂರ್ತಿ.ಕೆ : *ಕಾಯಕ ವಿಭೂತಿ*
ಮೈಸೂರು, ೨೦೦೮

೬ ಉಪಾದೇವಿ.ಸಿ.ಜಿ : *ಕನ್ನಡದಲ್ಲಿ ಐತಿಹಾಸಿಕ ನಾಟಕಗಳು*
ತಾರಾ ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸ್
ಮೈಸೂರು-೨೦೦೭

೭ ಚಿಕ್ಕಮಗಳೂರು ಗಣೇಶ : *ಬಯಲ ಗಾಳಿಯ ಹಿಡಿದು*
ರೂಪ ಪ್ರಕಾಶನ
ಮೈಸೂರು, ೨೦೧೫

ದೇವಕಾಂತ ಚಂ.ಬಿಜ್ಜರಗಿ : *ಅಹಲ್ಯಾಬಾಯಿ ಹೋಳಕರ್*
ಶ್ರೀ ಕಾಗಿನೆಲೆ ಮಹಾಸಂಸ್ಥಾನ ಕನಕ
ಗುರು ಪೀಠ
ರಾಯಚೂರು ಜಿಲ್ಲೆ, ೨೦೦೮

೮ ನಲ್ಲೂರು ಪ್ರಸಾದ್. ಆರ್.ಕೆ : **ಸಂಕ್ಷಿಪ್ತ ಕನ್ನಡ ನಿಘಂಟು**
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು, ೨೦೧೦

೯ ಸೌರಭ : *ಕಾರ್ಲ್ ಮಾರ್ಕ್ಸ್*
ನವಕರ್ನಾಟಕ ಪಬ್ಲಿಕೇಷನ್
ಬೆಂಗಳೂರು–೧

೧೦ ಅಸನ್ ನಯೀಂ ಸುರಕೋಡ : *ಲೋಹಿಯಾ*
ಲೋಹಿಯಾ ಪ್ರಕಾಶನ
ಬಳ್ಳಾರಿ, ೨೦೧೦

೧೧ ಹಳ್ಳಿಕೇರಿ.ಎಫ್.ಟಿ
ಡಾ.ರವೀಂದ್ರನಾಥ : *ದಶಕದ ಕನ್ನಡ ಸಾಹಿತ್ಯ*
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೨

೧೨ ಎಸ್.ನರೇಂದ್ರಕುಮಾರ್ : *ಅಂಬೇಡ್ಕರ್ ಸೂಕ್ತಿಗಳು*
ಚೇತನ ಬುಕ್ ಹೌಸ್
ಮೈಸೂರು, ೨೦೦೭

**ಅನುಬಂಧ–೩**

**ಲೇಖನಗಳು**

೧. ಅಣ್ಣಮ್ಮ: ಸ್ತ್ರೀ ಸಂಪದ(ಸಂ), ಕಾಯಕ ವಿಭೂತಿ, ೨೦೦೮.
೨. ನೀಲಾಂಬಿಕಾ ಪೊಲೀಸ್ ಪಾಟೀಲ: ನಿಶ್ಚಿಂತನಾಗಿರು ಮನವೆ: ಬಸವಪಥ, ಸಂಪುಟ ೩೧, ಸಂಚಿಕೆ–೧, ಏಪ್ರಿಲ್–೨೦೦೫.
೩. ಪ್ರಶಾಂತ್ ನಾಯಕ್.ಜಿ, ಮಲ್ಲಿಕಾ ಘಂಟಿ ಅವರ ವಿಮರ್ಶಾ ಕೃತಿಗಳು; ಅಪ್ರಕಟಿತ ಲೇಖನ, ೨೦೧೫.
೪. ವೆಂಕಟಗಿರಿ ದಳವಾಯಿ; ಕಾಯಕ ವಿಭೂತಿ (ಸಂ)
೫. ಹಸನಬಿ ಬೀಳಗಿ : ಸ್ತ್ರೀ ಅಸ್ಮಿತೆ: ಬಸವ ಪಥ; ಸಂಪುಟ ೩೧, ಸಂಚಿಕೆ–೧, ಏಪ್ರಿಲ್–೨೦೦೫.

**ಇಂಗ್ಲಿಷ್ ಲೇಖನಗಳು**

1. M.C.Mohankumari (GITA); 104 women will inspire (Inspiring stories from Karnataka); Publisher- Pramaan Publications, Mysore, 2014.
2. Venktagiri Dalawai; When Earth/Women Explode's

**ಜಾಲತಾಣಗಳು (websites)**

1. www.kanaja.in
2. www.kannadaabhivruddhipraadhikaara.gov.in
3. www.kannadauniversity.org
4. www.kendasampige.in
5. www.kuvempuuniversity.org

**ಅನುಬಂಧ – ೪**

## ಸಂಶೋಧನಾ ಪ್ರಬಂಧಗಳು

೧. ರೂಪ ಹಾಸನ ಅವರ ಕವಿತೆಗಳ ವಿಚಾರ ವಿಮರ್ಶೆ, ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಸಂಶೋಧನ ನಿಬಂಧ – ಕೆಂಪಹೊನ್ನಯ್ಯ, ೨೦೧೪

೨. ಕುವೆಂಪು ಹಾಗೂ ಕಾರಂತರ ಕಥಾಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ : ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ – ಗಣೇಶ, ೨೦೧೧

೩. ದೇವನೂರು, ನಾಗವಾರ ಮತ್ತು ಕುಂವೀ ಅವರ ಕತೆಗಳು : ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ, ಎಸ್.ನರೇಂದ್ರ ಕುಮಾರ್, ೨೦೦೬

೪. ವಿಜಯಾದಬ್ಬೆ ಅವರ ಸಾಹಿತ್ಯ ಒಂದು ಅಧ್ಯಯನ, ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಸಂಶೋಧನ ನಿಬಂಧ, ಪುಷ್ಪ.ಹೆಚ್.ಜಿ, ೨೦೦೯

೫. ಬಂಡಾಯ ಕತೆಗಳ ಗ್ರಾಮೀಣ ವಾಸ್ತವತೆ : ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ, ಬಿ.ಎಸ್.ಪ್ರಭು, ೨೦೦೫

**ಅನುಬಂಧ–೫**

**ಪತ್ರಿಕೆಗಳು:**

ಪ್ರಜಾವಾಣಿ, ಕನ್ನಡ ಪ್ರಭ, ತುಷಾರ, ಸಕಾಲ, ಸಂಕ್ರಮಣ, ಹೊಸತು, ಅರುಹು ಕುರುಹು, The Times of India, Deccan Herald etc.,

## ಸಂದರ್ಶನಗಳ ಮೂಲಕ ಸಂಶೋಧನೆಗೆ ನೆರವಾದವರು

ಶ್ರೀಮತಿ ಮಂಜುಳಾ ಮಾನಸ

ಪ್ರೊ. ಕಾಳೇಗೌಡ ನಾಗವಾರ

ಪ್ರೊ. ನೀಲಗಿರಿ ತಳವಾರ

ಪ್ರೊ. ಜಿ.ಪ್ರಶಾಂತ ನಾಯಕ್

ಶ್ರೀ ನಾಗರಾಜು

ಅನುಬಂಧ ೬

## ಡಾ. ಮಲ್ಲಿಕಾ ಘಂಟಿಯವರ ಬದುಕಿನ ಹೆಜ್ಜೆಗಳು

| ವರ್ಷ | ಜೀವನದ ಮುಖ್ಯ ಘಟನೆಗಳು |
| --- | --- |
| ೧೯೫೫ | ಮಲ್ಲಿಕಾ ಘಂಟಿ ಅವರ ಜನನ : ೧೭-೦೪-೧೯೫೫ |
| | ೧. ಹುಟ್ಟಿದ್ದು – ತಾಯಿಯ ವರು ಮನೆ ಅಗಸಬಾಳ (ಅಗಸಬಾಳ, ಬಸವನ ಬಾಗೇವಾಡಿ ತಾಲ್ಲೂಕು, ವಿಜಯಪುರ ಜಿಲ್ಲೆ) |
| | ೨. ಬೆಳೆದದ್ದು – ಬಾಲ್ಯ ಕಳೆದದ್ದು ಹಂಗರಗಿಯಲ್ಲಿ (ಹಂಗರಗಿ, ಬಾದಾಮಿ ತಾಲೂಕು, ಬಾಗಲಕೋಟೆ ಜಿಲ್ಲೆ) **ತಾಯಿ:** ಪಾರ್ವತಿ, **ತಂದೆ:** ಶಂಕರಪ್ಪ ಘಂಟಿ ಇವರ ಪೂರ್ಣ ಹೆಸರು ಮಲ್ಲಿಕಾ ಎಸ್.ಘಂಟಿ |
| | • ತಂದೆತಾಯಿ ಇಬ್ಬರೂ ವೃತ್ತಿಯಿಂದ ಶಿಕ್ಷಕರು. |
| | • ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣವನ್ನು ಬಾದಾಮಿಯಲ್ಲಿ ಪಡೆದರು |
| | • ಪ್ರೌಢಶಿಕ್ಷಣ ಪಡೆಯುವ ಸಂದರ್ಭದಲ್ಲಿ ತಮ್ಮ ಸೋದರಮಾವ ಗಣಪತಿಯವರೊಡನೆ ವಿವಾಹವೇರ್ಪಟ್ಟಿತು (೧೯೭೧) |
| | • ಜಮಖಂಡಿಯಲ್ಲಿ ಪದವಿಪೂರ್ವಶಿಕ್ಷಣ ಹಾಗೂ ಪದವಿ ಶಿಕ್ಷಣ ಪಡೆದರು |
| ೧೯೮೨ | ಧಾರವಾಡ ವಿಶ್ವವಿದ್ಯಾನಿಲಯದಿಂದ ಕನ್ನಡದಲ್ಲಿ ಎಂ.ಎ. ಪದವಿ ಪಡೆದರು |
| ೧೯೮೩ | ಕೆರೂರಿನ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿ ಆರಂಭ |
| | **ಕೃತಿಗಳ ವಿವರ** |
| ೧೯೮೬ | 'ತುಳಿಯದಿರಿ ನನ್ನ' ಮೊಟ್ಟಮೊದಲ ಕವನ ಸಂಕಲನ ಪ್ರಕಟವಾದದ್ದು |
| | 'ಈ ಹೆಣ್ಣುಗಳೆ ಹೀಗೆ' ಎಂಬ ಎರಡನೇ ಕವನ ಸಂಕಲನ ಬಿಡುಗಡೆಯಾಯಿತು |
| ೧೯೯೦ | 'ಚಾಜ' ಎಂಬ ಮೊಟ್ಟ ಮೊದಲ ನಾಟಕ ಪ್ರಕಟಣೆ |
| ೧೯೯೪ | ಪಿಎಚ್.ಡಿ. ಮಹಾಪ್ರಬಂಧ 'ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ' ಕೃತಿ ಪ್ರಕಟಣೆಗೊಂಡದ್ದು |
| | ಇದೇ ವರ್ಷದಲ್ಲಿ 'ಅಹಲ್ಯಾಬಾಯಿ ಹೋಳ್ಕರ್' ಜೀವನ ಚರಿತ್ರೆ ಪ್ರಕಟವಾಯಿತು |

೧೯೯೫ 'ರೊಟ್ಟಿ ಮತ್ತು ಹುಡುಗಿ' ಕವನಸಂಕಲನ ಪ್ರಕಟ

೧. ಸುಧಾಮೂರ್ತಿ ಪ್ರಶಸ್ತಿ
೨. ರತ್ನಮ್ಮ ಹೆಗಡೆ
೩. ಕಾವ್ಯಾನಂದ ಪ್ರಶಸ್ತಿ ದೊರೆತದ್ದು

೨೦೦೦ 'ತನುಕರಗದವರಲ್ಲಿ' ವಿಮರ್ಶಾ ಸಂಕಲನ ಪ್ರಕಟ

- ವಿಶ್ವೇಶ್ವರಯ್ಯ ಪ್ರಶಸ್ತಿ ದೊರೆತದ್ದು
- ಸಿಂಧೂರ ದತ್ತಿ ನಿಧಿ ಪ್ರಶಸ್ತಿ ದೊರೆತದ್ದು
- ಮಾತೋಶ್ರೀ ಮಾಣಿಕಬಾಯಿ ಪಾಟೀಲ ಪ್ರಶಸ್ತಿ ಸಲ್ಲಿಕೆ
- ಲಿಂಗರಾಜ ಪ್ರತಿಷ್ಠಾನ ಪ್ರಶಸ್ತಿ ದೊರೆಯಿತು

೨೦೦೧ ಬೈಂದೂರು ಪ್ರತಿಷ್ಠಾನ

೨೦೦೪ 'ತನುವ ನೇಗಿಲ ಮಾಡಿ' ಕೃತಿ ಪ್ರಕಟ

೨೦೦೫ 'ಧರಣಿಯ ಮೇಲೊಂದು' ವಿಮರ್ಶಾ ಸಂಕಲನ ಪ್ರಕಟ

೨೦೧೧ ಪಬ್ಲಿಕ್ ರಿಲೇಷನ್ ಕೌನ್ಸಿಲ್ ಆಫ್ ಇಂಡಿಯಾ, ಬೆಂಗಳೂರು ಗೌರವ ಪ್ರಶಸ್ತಿ

ಪಬ್ಲಿಕ್ ರಿಲೇಷನ್ ಕೌನ್ಸಿಲ್ ಆಫ್ ಇಂಡಿಯಾ, ಬೆಂಗಳುರು ಗೌರವ ಪ್ರಶಸ್ತಿ.

೨೦೧೩ ೭೮ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಗೌರವ ಸನ್ಮಾನ – ಗಂಗಾವತಿಯಲ್ಲಿ.

ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾನಿಲಯದ ಕುಲಸಚಿವರಾಗಿ ನೇಮಕ.

**ಪ್ರಶಸ್ತಿ ಮತ್ತು ಗೌರವ ಪುರಸ್ಕಾರಗಳು**

- ಶಿವಮೊಗ್ಗ ಜಿಲ್ಲಾ ದಸರಾ ಪ್ರಶಸ್ತಿ
- ಗೊರೂರು ಪ್ರಶಸ್ತಿ
- ಲಲಿತಾದೇವಿ ಗುರುಸಿದ್ದಪ್ಪ ಸಿಂಧೂರ ದತ್ತಿ ಪ್ರಶಸ್ತಿ
- ಗುಲ್ಬರ್ಗಾ ವಿಶ್ವವಿದ್ಯಾನಿಲಯದ 'ರಾಜ್ಯೋತ್ಸವ ಪ್ರಶಸ್ತಿ'
- ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

**ಸಾಮಾಜಿಕ ಸೇವೆ**

**ಕುಮಾರಸ್ವಾಮಿ ದೇವಾಲಯಕ್ಕೆ ಮಹಿಳೆಯರ ಪ್ರವೇಶ ಪಡೆದದ್ದು**

೨೦೧೫
- ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಅತ್ಯಂತ ಪುರಾತನವಾದ ಇತಿಹಾಸ ಪ್ರಸಿದ್ಧವಾದ ಶ್ರೀಕುಮಾರಸ್ವಾಮಿ ದೇವಾಲಯಕ್ಕೆ ಮಹಿಳೆಯರ ಪ್ರವೇಶವನ್ನು ನಿರಾಕರಿಸಲಾಗಿತ್ತು.

ಇದನ್ನು ಘಂಟಿಯವರು ಹಾಸನದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾಗೋಷ್ಠಿಯಲ್ಲಿ ಭಾಗವಹಿಸಿ ಈ ವಿಷಯ ಕುರಿತು ಪ್ರಶ್ನಿಸಿ ಪ್ರತಿಭಟಿಸಿದರು. ಅದರ ಪರಿಣಾಮವಾಗಿ ಇಂದು ಅಲ್ಲಿ ಮಹಿಳೆಯರಿಗೆ ದೇವಾಲಯ ಪ್ರವೇಶದ ಮುಕ್ತ ಅವಕಾಶ ದೊರಕಿದೆ.

- "ಸಂಡೂರು ನಗರದ ಪ್ರಸಿದ್ಧ ಊರಮ್ಮನ ಜಾತ್ರೆಯಲ್ಲಿ ಕೋಣ ಬಲಿಕೊಡುವುದನ್ನು ಮಲ್ಲಿಕಾ ಘಂಟಿ ವಿರೋಧಿಸಿದ್ದರು. ಇದರ ಪರಿಣಾಮವಾಗಿ ಸನ್ಮಾನ್ಯ ದಿ. ಎಂ.ವೈ.ಘೋರ್ಪಡೆಯವರು ಕೋಣ ಬಲಿಯನ್ನು ನಿಲ್ಲಿಸುವುದರ ಮೂಲಕ ಪ್ರಾಣಿಹಿಂಸೆಯ ಪ್ರಕರಣಕ್ಕೆ ಸುಖಾಂತ್ಯವನ್ನು ನೀಡಿದರು.

೨೦೧೧ "ಗದುಗಿನಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯ ಆಶಯ ಪರ ಮಾತುಗಳನ್ನು ಆಡುತ್ತಾ ಪೊಲೀಸ್ ಅಧಿಕಾರಿಗಳು ಸಾಹಿತಿಗಳ ಜೊತೆಗೆ ಮತ್ತು ಸಾಹಿತ್ಯ ಸಮ್ಮೇಳನದಲ್ಲಿ ಕರ್ತವ್ಯ ನಿಭಾಯಿಸುವ ರೀತಿಯನ್ನು ಕುರಿತು ಮಲ್ಲಿಕಾ ಘಂಟಿ ಮಾತನಾಡಿದ್ದರು. ಇದರ ಪರಿಣಾಮವಾಗಿ ಕರ್ನಾಟಕ ಸರಕಾರದ ಗೃಹಸಚಿವರು ಗಂಗಾವತಿಯಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಉಸ್ತುವಾರಿಗೆ ಪೊಲೀಸ್ ಸಿಬ್ಬಂಧಿಯನ್ನು ನೇಮಿಸುವಾಗ ಅವರಿಗೆ ಸಾರ್ವಜನಿಕರ ಜೊತೆಗೆ ಮತ್ತು ಸಾಹಿತಿಗಳ ಜೊತೆಗೆ ಹೇಗೆ ವರ್ತಿಸಬೇಕು ಎಂಬುದರ ಕುರಿತು ತರಬೇತಿ ನೀಡಲು ಸುತ್ತೋಲೆ ಹೊರಡಿಸಿದ್ದರು ಇನ್ನು ಮುಂತಾದವು.



ಡಾ. ಮಲ್ಲಿಕಾ ಎಸ್.ಘಂಟಿ



ಖ್ಯಾತ ಕಾದಂಬರಿಕಾರ
ಬಸವರಾಜ ಕಟ್ಟೀಮನಿಯವರೊಂದಿಗೆ



ಗುಲ್ಬರ್ಗಾದಲ್ಲಿ ಪುಸ್ತಕ ಪ್ರಶಸ್ತಿ ಪ್ರದಾನ ಸಂದರ್ಭದಲ್ಲಿ.
ಚೆನ್ನವೀರಕಣವಿ, ಪ್ರೊ. ಮೂಲಿಮನಿ, ಕುಲಪತಿಗಳು



ಡಾ. ಹಾ.ಮಾ.ನಾಯಕ ಮತ್ತು ನಾಗರತ್ನ ಕಲಾವಿದೆ




ಲೇಖಕಿಯರ ಸಮ್ಮೇಳನ, ಬೆಂಗಳೂರು




ಸಹ್ಯಾದ್ರಿ ಸಿರಿಗಂಧ – ೨೦೧೪
ಕುವೆಂಪು ವಿ.ವಿ.ಕಾರ್ಯಕ್ರಮ



ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ – ೨೦೧೩.
ಮುಖ್ಯಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯ, ಶ್ರೀಮತಿ ಉಮಾಶ್ರೀ, ಶ್ರೀ ರಾಮಲಿಂಗಾರೆಡ್ಡಿ



ರಾಜ್ಯೋತ್ಸವ ಪ್ರಶಸ್ತಿ ಪಡೆದ ಸಂದರ್ಭದಲ್ಲಿ
ಬಳ್ಳಾರಿಯಲ್ಲಿ ಸನ್ಮಾನ



ಕ್ರಾಂತಿಕವಿ ಗದ್ದರ



ಕುವೆಂಪು ವಿ.ವಿ.ಯ ಸಹ್ಯಾದ್ರಿ ಉತ್ಸಾವದ ಸಭಾಂಗಣ



ಮಾತೋಶ್ರೀ ರತ್ನಮ್ಮ ಹೆಗ್ಗಡೆ ಪ್ರಶಸ್ತಿ ಪ್ರಧಾನ
ಡಾ. ಪಾಟೀಲ ಪುಟ್ಟಪ್ಪ ಹೆಗಡೆಯವರು



ನಿವೃತ ನ್ಯಾಯವಾದಿ ರಾಮಾಜೋಶಿ ಮತ್ತು
ಸುಧಾಮೂರ್ತಿ



ಕುಲಸಚಿವರಾಗಿ ಡಾ. ಮಲ್ಲಿಕಾ ಘಂಟಿ

ಅನುಬಂಧ-೮

# ಲೇಖಕರ ಸಂದರ್ಶನ

*೧. ಸಾಹಿತ್ಯದೊಡನೆ ನಿಮಗೆ ನಂಟು ಹೇಗೆ ಉಂಟಾಯಿತು?*

ನಮ್ಮ ಕುಟುಂಬದಲ್ಲಿ ಯಾವುದೇ ಸಾಹಿತ್ಯದ ಪರಿಸರ ಇಲ್ಲದಾಕಿ. ನಮ್ಮ ಮನೆಯಲ್ಲಿ ಯಾರು ಸಾಹಿತಿಗಳು ಇಲ್ಲ. ಪದವಿ ಮಟ್ಟದಲ್ಲಿ ಓದಿದವರು ಇರಲಿಲ್ಲ. ನಾನು ಧಾರವಾಡ ವಿಶ್ವವಿದ್ಯಾನಿಲಯಕ್ಕೆ ಎಂ.ಎ.ಗೆ ಬಂದ ಮೇಲೆ ಬಸವರಾಜ ಕಟ್ಟೀಮನಿಯವರ ಪರಿಚಯವಾಯಿತು. ಪ್ರಗತಿಶೀಲ ಪಂಥದ ಬಹುದೊಡ್ಡ ಸಾಹಿತಿಗಳಾದ ಬಸವರಾಜ ಕಟ್ಟೀಮನಿಯವರ ಮೂಲಕ ಓದುವ ಹವ್ಯಾಸ ಹೆಚ್ಚಾಯಿತು. ನಾನು ಜನಪ್ರಿಯ ಕಾದಂಬರಿಗಳನ್ನು ಓದುವ ಹವ್ಯಾಸ ಇಟ್ಟುಕೊಂಡಿದ್ದೆ. ಆದರೆ ಅದಕ್ಕೆ ಒಂದು ಸ್ಪಷ್ಟ ರೂಪರೇಷೆ ಇರಲಿಲ್ಲ. ಆ ಸ್ಪಷ್ಟತೆ ಸಿಕ್ಕಿದ್ದು ಬಸವರಾಜ ಕಟ್ಟೀಮನಿಯವರ ಸಂಪರ್ಕದ ಮೂಲಕ, ಒಡನಾಟದ ಮೂಲಕ ಎಂದೇ ಹೇಳಬೇಕು.

*೨. ಚಳವಳಿ ನೀವು ಮತ್ತು ನಿಮ್ಮ ಸಾಹಿತ್ಯ, ಅದರ ಒಡನಾಟ?*

ನಾನು ಚಳವಳಿಗೆ ನೇರವಾಗಿ ಬಂದಾಕೆಯಲ್ಲ. ನನಗೆ ಸ್ಪಷ್ಟವಾದ ಓದಿನ ಗೊತ್ತು ಗುರಿಗಳೇ ಇರಲಿಲ್ಲ. ಕುಟುಂಬದಲ್ಲಿಯೂ ಅಂತಹದ್ದು ಯಾವುದೂ ಇರಲಿಲ್ಲ. ತಿಳಿವಳಿಕೆ ಬಂದ ಮೇಲೆ ನಾವು ಹೀಗೆ ಆಗಬೇಕೆಂದುಕೊಂಡವರು. ಖಚಿತತೆ ಬಂದಿದ್ದೇ ಆವಾಗ. ಗುರಿಯನ್ನು ಇಟ್ಟುಕೊಳ್ಳಲಿಕ್ಕೆ ನನಗೆ ಸಾಧ್ಯವಿದ್ದರು ಕುಟುಂಬಗಳು ಅದನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅವರಿಗೆ ಕೆಲಸ ಮಾಡಬೇಕು, ಸಂಬಳ ತರಬೇಕು ಇಷ್ಟು ಮಾತ್ರ ಇದ್ದದ್ದು. ಅದರಾಚೆಯ ವ್ಯಕ್ತಿತ್ವ ಅವರಿಗೆ ಗೊತ್ತಿರಲಿಲ್ಲ. ಆದರೆ ನನ್ನ ಸಹಪಾಠಿಗಳು ಸಿದ್ದನಗೌಡ ಪಾಟೀಲ, ಶಶಿಕಲ ಹಿರೇಮಠ, ಪ್ರಭುದೇವ ಹಾದಿಮನಿ, ಯಲ್ಲಪ್ಪ ಇಲಾಳ, ನೀಲಗಿರಿ ತಳವಾರ ಇವರೆಲ್ಲ ಆವಾಗ ಚಳವಳಿ ಇವುಗಳಲ್ಲಿ ತೊಡಗಿಸಿಕೊಂಡಿದ್ದರು. ಚಂಪಾ ಅಂತಹವರೆಲ್ಲ ತುರ್ತು ಪರಿಸ್ಥಿತಿ ಮುಗಿಸಿ ವಿ.ವಿ.ಯೊಳಗೆ ಆಗತಾನೆ ಚಳವಳಿಗಿಳಿದ್ದರು. ೧೯೭೦-೮೦ರ ದಶಕದಲ್ಲಿ ಕರ್ನಾಟಕದೊಳಗೆ ಒಂದು ಹೊಸ ವಾತಾವರಣ ಮೂಡಿತ್ತು. ಹೀಗಾಗಿ ನಾನು ೮೨ರಲ್ಲಿ ಎಂ.ಎ. ಮುಗಿಸಿದಾಕೆ. ೮೩ಕ್ಕೆ ಗೋಕಾಕ್ ಚಳವಳಿ ಚಾಲೂ ಆಗಿತ್ತು. ಬಂಡಾಯ ಸಾಹಿತ್ಯ ಸಂಘಟನೆ ಬಹಳ ಉಚ್ಛ್ರಾಯ ಕಾಲ. ಎಡಪಂಥೀಯ ಸಂಘಟನೆಗಳು ಸಕ್ರಿಯವಾಗಿದ್ದವು. ದಲಿತ ಸಂಘಟನೆಗಳು, ಎಡಪಂಥೀಯ ಸಂಘಟನೆಗಳು, ರೈತ ಚಳವಳಿಗಳು ಬಹಳ ಸಕ್ರಿಯವಾಗಿರುವಂತಹ ಕಾಲವದು.

ಹೀಗಾಗಿ ಬಹುಶಃ ಆ ತಲೆಮಾರು ಒಂದಲ್ಲ ಒಂದು ರೀತಿ ಚಳವಳಿಯೊಳಗೆ ಇರುತ್ತಿದ್ದರು. ಹೀಗಾಗಿ ಚಳವಳಿ ಎನ್ನುವಂತಹದ್ದು ನನಗೆ ಆ ರೀತಿಯಾಗಿ ಬಂತು. ವಿದ್ಯಾರ್ಥಿ ಸಂಘಟನೆಯ ಮೂಲಕ ಚಳವಳಿಗೆ ಬಂದಾಕೆ ನಾನು. ಎಡಪಂಥೀಯ ವಿದ್ಯಾರ್ಥಿ ಸಂಘಟನೆ ಅದು. ಇವುಗಳ ಮೂಲಕ ನಾನು ಚಳವಳಿಗೆ ಬಂದವಳು. ಗೀತಾನಾಗಭೂಷಣ, ಸವಿತಾ ನಾಗಭೂಷಣ ಇವರುಗಳು ಆ ಹೊತ್ತಿನ ಚಳವಳಿಗಳಲ್ಲಿ ಇದ್ದರು. ಇವರುಗಳ ಜೊತೆಯಲ್ಲಿ ಸಂಘಟನೆಯಲ್ಲಿ ಇರುತ್ತಿದ್ದೆವು. ನನ್ನನ್ನು ಹೆಚ್ಚು ಬೆಳೆಸಿದ್ದು ಎಡಪಂಥೀಯ ಸಂಘಟನೆ, ರೈತ ಅಥವಾ ಕಾರ್ಮಿಕ ಚಳವಳಿ. ಯಾವುದೇ ಕಾರ್ಯಕ್ರಮ ಇದ್ದರೂ ನನಗೆ ವೇದಿಕೆಯನ್ನು ಕಲ್ಪಿಸುತ್ತಿದ್ದರು. ಹೀಗಾಗಿ ಭಾಷಣ ಎನ್ನುವುದು ನನಗೆ ಚಳವಳಿಯ ಮೂಲಕ ಬಂತು. ಜೊತೆಗೆ ಬರೆಯಲಿಕ್ಕೂ ಸಾಕಷ್ಟು ಅವಕಾಶಗಳು ಸಿಕ್ಕವು.

*೩. ಸಾಹಿತ್ಯ ಕ್ಷೇತ್ರದಲ್ಲಿ ನಿಮಗೆ ಗುರುಗಳು ಯಾರು?*

ಬಂಡಾಯ ಸಾಹಿತ್ಯ ಸಂಘಟನೆಯೊಳಗೆ ಬರಗೂರು ರಾಮಚಂದ್ರಪ್ಪ ಹಾಗೂ ನಮ್ಮ ಕಡೆಯ ಮೊದಲ ತಲೆಮಾರಿನ ಲೇಖಕರಾಗಿದ್ದ ಚಂಪಾ ಇವರುಗಳ ಪ್ರಭಾವದಿಂದ ಬರಹಕ್ಕೆ ತೊಡಗಿಕೊಂಡೆ. ನನ್ನ ಮೊದಲ ಕವನ ಸಂಕಲನ 'ತುಳಿಯದಿರಿ ನನ್ನ'ವನ್ನು ಬಸವರಾಜ ಕಟ್ಟೀಮನಿಯವರೇ ಮುದ್ರಣ ಮಾಡಿಸಿದರು. ಅದು ವಿದ್ಯಾರ್ಥಿ ಸಮುದಾಯದಲ್ಲಿ ಬಹುದೊಡ್ಡ ರೀತಿಯಲ್ಲಿ ಬಿಡುಗಡೆ ಮಾಡಿಸುವ ಮೂಲಕ ಒಂದು ಸಾಹಿತ್ಯ ಲೋಕದ ಪ್ರವೇಶಿಕೆ ಸಾಧ್ಯವಾಯಿತು. ಅವರೇ ಬದುಕಿನಲ್ಲಿ ಒಂದು ತಿರುವು ತಂದುಕೊಟ್ಟವರು. ನಾನು ಹೆಚ್ಚು ಬೆಳೆದದ್ದು ಬಸವರಾಜ ಕಟ್ಟೀಮನಿಯವರ ಮೂಲಕ ಸಾಹಿತ್ಯದಲ್ಲಿ ಮತ್ತು ಸಿದ್ದನಗೌಡ ಪಾಟೀಲರ ಮೂಲಕ ಸಂಘಟನೆಯಲ್ಲಿ, ಚಳವಳಿಯಲ್ಲಿ ತೊಡಗಿಕೊಳ್ಳಲು ಸಾಧ್ಯವಾಯಿತು. ಹಾಗಾಗಿ ಚಳವಳಿಯ ಗುರು ಸಿದ್ದನಗೌಡ, ಸಾಹಿತ್ಯದ ಗುರು ಬಸವರಾಜ ಕಟ್ಟೀಮನಿ.

*೪. ದಲಿತ ಬಂಡಾಯ ಪರಂಪರೆ ಬಗ್ಗೆ*

ದಲಿತ ಬಂಡಾಯದ ಆಶಯವಾದ ಪ್ರತಿಭಟನೆ ಚರಿತ್ರೆಯುದ್ದಕ್ಕೂ ಇದೆ. ಒಂದರ್ಥದಲ್ಲಿ ಚಳವಳಿ ಎಂಬುದು ಅಂತರ್ಗತವಾಗಿ ಆಗುವಂತದ್ದು. ಅದು ಎದ್ದು ಕಂಡಿದ್ದು ೭೦-೮೦ರ ದಶಕದಲ್ಲಿ. ಅದಕ್ಕೆ ಒಂದು ಹೆಸರು ಕೊಟ್ಟು ಆಕಾರಕೊಟ್ಟು ಕರೆದದ್ದು ಇತ್ತೀಚೆಗೆ. ಅದಕ್ಕೆ ಆ ಕಾಲದ್ದಲಿ ಸಾಹಿತ್ಯಕ, ಸಾಮಾಜಿಕ ಅನಿವಾರ್ಯತೆಗಳು ಸೃಷ್ಟಿಯಾಗಿದ್ದವು. ಹೀಗಾಗಿ ಅನಿವಾರ್ಯತೆ ಕಾರಣದಿಂದ ದಲಿತ-ಬಂಡಾಯ ಸಾಹಿತ್ಯದ ಒಂದು ಘಟ್ಟ ಹುಟ್ಟಿಕೊಳ್ಳಲಿಕ್ಕೆ ಸಾಧ್ಯವಾಯಿತು. ಏಕೆಂದರೆ ಆಗ ನವ್ಯದ, ಮಧ್ಯಮ, ವರ್ಗದವರ

ತೆವಲುಗಳಿಂದ ಸಾಹಿತ್ಯ ತುಂಬಿಹೋಗಿತ್ತು. ಅಲ್ಲಿ ವೈಯಕ್ತಿಕ ಬದುಕಿನ ಜಿಜ್ಞಾಸೆ ಮೇಲುಗೈಯಾಗಿತ್ತು. ಇದರಿಂದಾಗಿ ಕೆಳವರ್ಗದವರ ಕೆಳಮಧ್ಯಮವರ್ಗದವರ ಬರಹಗಾರರನ್ನು ಹಿಡಿದಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಇದು ಎಲ್ಲೋ ಒಂದು ಕಡೆ ನಮಗೆ ಭಿನ್ನವಾದ ವೇದಿಕೆ ಬೇಕು ಎನ್ನುವಂತೆ ಮಾಡಿತು. ಗ್ರಾಮೀಣ ಮೂಲದಿಂದ ಬರಹಗಾರರು ಆಗತಾನೆ ವಿಶ್ವವಿದ್ಯಾನಿಲಯಕ್ಕೆ ಅಧ್ಯಾಪಕರಾಗಿ ಬರುತ್ತಿದ್ದರು.

ಆ ಚಳವಳಿ ಹುಟ್ಟಿಗೆ ಒಂದು ಸಣ್ಣ ಸಾಂದರ್ಭಿಕ ಕಾರಣ ಏನಾಯಿತು ಎಂದರೆ: ಹಂಪನಾ ಅಧ್ಯಕ್ಷರಾಗಿದ್ದಾಗ ಧರ್ಮಸ್ಥಳದ ಸಾಹಿತ್ಯ ಸಮ್ಮೇಳನದೊಳಗೆ ದಲಿತಗೋಷ್ಠಿ ಬೇಕು ಎಂದಾಗ ದಲಿತ, ಬಲಿತ, ಕಲಿತ ಎಂಬುದು ಸಾಹಿತ್ಯದೊಳಗೆ ಇರಬೇಕಾಗಿಲ್ಲ ಎಂದು ಲೇವಡಿ ಮಾಡಿದರು. ಅದನ್ನು ಲಂಕೇಶ, ಬರಗೂರು ಸಿದ್ದಲಿಂಗಯ್ಯ, ಕಾಳೇಗೌಡ ನಾಗವಾರ ಅಂತಹವರು ಗಂಭೀರವಾಗಿ ತಗೊಂಡು ಒಂದು ಪರ್ಯಾಯ ಸಮ್ಮೇಳನವನ್ನು ಬೆಂಗಳೂರಿನಲ್ಲಿ ಆಯೋಜಿಸಿದರು. ಅದರ ಪರಿಣಾಮವಾಗಿ ಎಡಪಂಥೀಯವಾದ ಬಂಡಾಯ-ದಲಿತ ಸಾಹಿತ್ಯದ ಹುಟ್ಟಿಗೆ ಕಾರಣರಾದರು.

*೫. ಸಾಮಾಜಿಕ ನ್ಯಾಯದ ಚಿಂತನೆಗಳು ನಿಮ್ಮ ದೃಷ್ಟಿಯಲ್ಲಿ?*

ಸಾಹಿತ್ಯ 'ಕಲೆಗಾಗಿ ಕಲೆ' ಎಂಬ ವಾದವನ್ನು ಬಿಡಬೇಕು. ಬದುಕಿಗಾಗಿ ಕಲೆ ಇರಬೇಕು. ಬದುಕು ಎನ್ನುವಂತಹದ್ದು ಇದೆಯಲ್ಲ ಅದು ಆರ್ಥಿಕ ಸ್ಥರದ ಮೇಲೆ ನಿಂತಿರುತ್ತದೆ. ಭದ್ರವಾದ ಆರ್ಥಿಕತೆಯಿದ್ದರೆ ಅದರ ಮೇಲಿರುವ ಕಲೆ, ಸಾಹಿತ್ಯ, ಲಲಿತಕಲೆ ಸಮೃದ್ಧವಾಗಿ ಅಭಿವೃದ್ಧಿ ಹೊಂದುವುದಕ್ಕೆ ಸಾಧ್ಯವಾಗುತ್ತದೆ. ನಮ್ಮಂತಹ ದೇಶದಲ್ಲಿ ಜಾತಿ, ವರ್ಗ, ಇವೆಲ್ಲಾ ಜೀವಂತವಿರುವ ಕಾರಣಕ್ಕಾಗಿ ನಾವು ಯಾರ ಪರವಾಗಿ ಬರೆಯಬೇಕು; ಯಾರ ಪರವಾಗಿ ನಿಲ್ಲಬೇಕು – ಅದನ್ನು ಗುರ್ತಿಸಿಕೊಳ್ಳುವ ಅಗತ್ಯ ಆ ಕಾಲಕ್ಕೆ ಇತ್ತು. ಹೀಗಾಗಿ ನಾವೆಲ್ಲ ಶೋಷಿತರ ಪರವಾಗಿ, ಸಾಮಾಜಿಕ ಅವಕಾಶಗಳಿಂದ ವಂಚಿತರಾದಂತಹ ಜನರ ಪರವಾಗಿ ಜಾತಿಯ ಕಾರಣದಿಂದ ನೋವಿಗೆ ಒಳಗಾದ ಕಾರಣಕ್ಕಾಗಿ ನಿಂತು ಬರೆದೆವು. ಸ್ವತಃ ನಾವೇ ಅನ್ಯಾಯಕ್ಕೆ ಒಳಗಾದವರು ಜಾತಿ, ವರ್ಗದ ಹಿನ್ನೆಲೆಯವರಾದ್ದರಿಂದ ಈ ಕಲೆ ನನ್ನಂಥವರನ್ನು ಒಳಗು ಮಾಡಿಕೊಂಡು ರೂಪಿಸಿತು.

*೬. ನಿಮ್ಮ ಮೊದಲ ಬರಹದ ಅನುಭವ*

'ತುಳಿಯದಿರಿ ನನ್ನ' ಇದು ನನ್ನ ಮೊದಲ ಕವನ ಸಂಕಲನ. ಬಡತನ, ಅಜ್ಞಾನ, ಶೋಷಣೆ, ಜಮೀನ್ದಾರಿಕೆ ಇಂತಹ ವಸ್ತುಗಳನ್ನಿಟ್ಟುಕೊಂಡು ನನ್ನ ಮೊದಲ ಕವನಸಂಕಲನ ಬರೆದಿದ್ದು 'ತುಳಿಯದಿರಿ ನನ್ನ' ಎಂದರೆ ಸಮಾಜದಲ್ಲಿ 'ಅಸಹಾಯಕರನ್ನು ತುಳಿಯಬೇಡಿ' ಅಂತ. 'ಅಸಹಾಯಕ' ಎಂಬ ಪದವೇ ಇರಬಾರದು ಅಂತ ನನ್ನ ಕಾಳಜಿ. ಮನುಷ್ಯ

ಲೋಕ ಸಮಾನವಾಗಿ ಇರಬೇಕು. ಈ ಸಮಾಜದಲ್ಲಿ ಜಾತಿಧರ್ಮದ ಕಾರಣಕ್ಕಾಗಿ, ತುಳಿಯಲ್ಪಡುವುದನ್ನು ಕುರಿತು ಜನರಿಗೆ ಎಚ್ಚರಿಕೆಯ ರೂಪದಲ್ಲಿ ಬರೆಯುತ್ತಿದ್ದೆ. ಅವುಗಳನ್ನೆಲ್ಲ ಸೇರಿಸಿ ಒಂದು ಸಂಕಲನ ಮಾಡಿದೆ.

*೭. ನೀವು ರಚಿಸಲು ತೊಡಗಿದ ಸಾಹಿತ್ಯ ಪ್ರಕಾರಗಳು*

ನಾನು ಕಾವ್ಯ, ವಿಮರ್ಶೆ ಮತ್ತು ನಾಟಕ ಈ ಮೂರು ಕ್ಷೇತ್ರಗಳಲ್ಲೂ ತೊಡಗಿದ್ದೇನೆ. ಶಾಸ್ತ್ರೀಯ ಸಂಶೋಧನೆ ನನಗೆ ಒಗ್ಗಲಿಲ್ಲ. ಆದರೂ ಶಾಸ್ತ್ರೀಯ ಸಂಶೋಧನೆ ನನಗೆ ಖುಷಿಕೊಡುತ್ತದೆ.

ನನಗೆ ನಾಟಕ ಬಹಳ ಖುಷಿಕೊಡುತ್ತದೆ. ನಾಟಕ, ಕಾವ್ಯ ನನಗೆ ತುಂಬ ಇಷ್ಟ. ಸಾಂದರ್ಭಿಕವಾಗಿ ವಿಮರ್ಶೆಗಳನ್ನು ಮಾಡುತ್ತಾ ಬಂದೆ. ಪೂರ್ಣ ಪ್ರಮಾಣದಲ್ಲಿ ಯಾವುದರಲ್ಲೂ ತೊಡಗಿಕೊಳ್ಳಲಾಗಲಿಲ್ಲ. ನಾನು ಒಪ್ಪಿದ್ದನ್ನು ಹೊರಹಾಕುವುದಕ್ಕೆ ಒಂದು ರಹದಾರಿ. ಹೀಗಾಗಿ ಈ ಮೂರೇ ಪ್ರಕಾರದೊಳಗೆ ನನಗೆ ಅಲ್ಲಲ್ಲಿ ಕೆಲಸ ಮಾಡಲು ಸಾಧ್ಯವಾಗಿದೆ.

*೮. ಸ್ತ್ರೀವಾದಿ ಚಿಂತನೆ : ಭಾರತೀಯ ಸ್ತ್ರೀವಾದ ತಮ್ಮ ಅಭಿಪ್ರಾಯ?*

ನನಗೆ ಪಾಶ್ಚಾತ್ಯ ನೆಲೆಯಿಂದ ಬಂದಂತಹ ಸಿದ್ಧಾಂತಗಳ ಬಗ್ಗೆ ಆಸಕ್ತಿ ಇರಲಿಲ್ಲ. ಹೀಗಾಗಿ ದೇಶಿನೆಲೆಯೊಳಗೆ ಇರುವ ದೇಶಿ ಚಿಂತನೆಗಳು ಚಳವಳಿಗೆ ಆತ್ಮಸಂಗಾತತನವನ್ನು ತಂದುಕೊಟ್ಟವು. ಹೀಗಾಗಿ ಅಂಬೇಡ್ಕರ್ ಸಿದ್ಧಾಂತ ಆಗಿರಬಹುದು, ಗಾಂಧಿ ಆಗಿರಬಹುದು. ಈ ತರಹದ ವಿಚಾರಧಾರೆಗಳು ಇದಾವಲ್ಲ. ಇದರ ಬೆಳಕಿನೊಳಗೆ ನನ್ನ ಲೋಕವನ್ನು ನೋಡಲು ಇಷ್ಟಪಟ್ಟೆ. ಸ್ತ್ರೀವಾದ ಎನ್ನುವಂತಹದ್ದು ಹೊರಗಿನ ಪರಿಭಾಷೆ, ಹೊರಗಿನಿಂದ ಬಂದಂತದ್ದು. ಅದೇ ಸಂದರ್ಭದಲ್ಲಿ ಭಾರತದೊಳಗೂ ಆ ತರಹದ ಮನೋಭಾವಗಳು ಚರಿತ್ರೆಯೊಳಗೆ ಅಲ್ಲಲ್ಲಿ ಮಾತಾಡಿ ಹೋಗಿವೆ. ಅದಕ್ಕೆ ನಾವು ಸ್ತ್ರೀವಾದ ಎಂದು ಕರೆಯಲಿಲ್ಲ. ಹೀಗಾಗಿ ಸ್ತ್ರೀವಾದ ಎನ್ನುವಂತದ್ದು. ಭಾರತದಂತಹ ದೇಶದೊಳಗೆ ಆ ಒಂದು ಪರಿಭಾಷೆಯನ್ನು ಇಟ್ಟುಕೊಂಡು ಮಾತನಾಡುವಾಗ ಸ್ತ್ರೀ ಮಾದರಿಗಳು. ಸ್ತ್ರೀ ಆಕೃತಿಗಳು ಏಕಾಕೃತಿಯಲ್ಲಿ ಇಲ್ಲ. ಅದು ಪಶ್ಚಿಮದೊಳಗೆ ನಮ್ಮಷ್ಟು ವೈವಿಧ್ಯತೆಯಾಗಿಲ್ಲ. ಅಲ್ಲಿ ಧರ್ಮ ಇದ್ದರೆ ಅದು ಕ್ರಿಶ್ಚಿಯಾನಿಟಿ ಹಾಗೆ ವರ್ಗ ಇದ್ದರೆ ಕೆಳವರ್ಗ, ಮೇಲ್ವರ್ಗ ಇವೆರಡು ಮಾತ್ರ ಇರುತ್ತವೆ. ನಮ್ಮ ದೇಶದೊಳಗೆ ಹೀಗೆಲ್ಲಾ ಜಾತಿ ಎನ್ನುವಂತದ್ದು ಇಡೀ ಪ್ರಪಂಚಕ್ಕಿಂತಲೂ ಇಲ್ಲಿ ವಿಶಿಷ್ಟವಾದಂತಹ ರೀತಿಯೊಳಗೆ ಮತ್ತು ಬಹಳ ವೈವಿಧ್ಯತೆಗಳನ್ನು ಒಳಗೊಂಡಂತೆ ಬೆಳೆದಿದೆ. ಇಲ್ಲಿನ ಬದುಕಿನ ಕ್ರಮ ಇದು. ಹೀಗಾಗಿ ಯಾವುದೋ ಒಂದು ವಿಚಾರಧಾರೆಯನ್ನು ಇಡೀ ಭಾರತದಕ್ಕೆ ತಂದು ಅನ್ವಯಿಸಿಕೊಳ್ಳಲು ಆಗುವುದಿಲ್ಲ.

ಹೇಗೆ ಬ್ರಿಟಿಷರು ಮಹಿಳಾ ಪರವಾದಂತಹ ಕಾನೂನುಗಳನ್ನು ಸರಳೀಕರಿಸಿದರೋ ಹಾಗೆ ಅವರು ಮೇಲ್ಜಾತಿಯ ಮಹಿಳೆಯರ ಸಮಸ್ಯೆಯನ್ನು ಇಡೀ ದೇಶದ ಮಹಿಳೆಯ ಸಮಸ್ಯೆ ಅನ್ನುವ ಹಾಗೆ ಬಿಂಬಿಸಿದರು. ಹಾಗೆಯೇ ಈ ಸ್ತ್ರೀ ವಾದವು ಸಹ ಮೇಲ್ಜಾತಿ, ಮೇಲ್ವರ್ಗದ ಮಹಿಳೆಯ ಚಿಂತನೆಗಳ ಬಗ್ಗೆ ಹೆಚ್ಚು, ಆಸ್ಪದವನ್ನು ಕೊಡುವಂಥದ್ದು. ಮೇಲ್ಜಾತಿ ಮಹಿಳೆಯರ ಬದುಕನ್ನು ಕುರಿತ ಹಾಗೆ ಮಾತನಾಡುತ್ತದೆಯೇ ಹೊರತು ಇಡೀ ಭಾರತದ ಮಹಿಳೆಯನ್ನು ಅಲ್ಲಿ ನೋಡಲಿಕ್ಕೆ ಆಗುವುದಿಲ್ಲ.

*೯. ನಿಮ್ಮ ಮೇಲೆ ಸ್ತ್ರೀವಾದದ ಪ್ರಭಾವ?*

ನನ್ನ ಮೇಲಿನ ಪ್ರಭಾವ ಅಂದರೆ, ಮಹಿಳೆಯರನ್ನು ಕುರಿತ ಹಾಗೆ ಆಲೋಚನೆ ಮಾಡಲಿಕ್ಕೆ ನನಗೆ ಒಂದು ಪುಟ್ಟ ಕನ್ನಡಿ ಅದು; ಕಿಟಕಿ ಅದು. ಹೊರಗಿನಿಂದ ಆ ಕಿಟಕಿ ಮೂಲಕ ಬೆಳಕು ಬಂದಿದೆ. ಆ ಬೆಳಕಿನೊಳಗೆ ನನ್ನ ಬದುಕನ್ನು, ನನ್ನ ಕುಟುಂಬವನ್ನು, ಸಮಾಜವನ್ನು ಚರಿತ್ರೆಯನ್ನು ನನ್ನದೇ ಆದ ರೀತಿಯೊಳಗೆ ಅರ್ಥೈಸಿಕೊಳ್ಳೋಕೆ ಪ್ರಯತ್ನಪಡುತ್ತೇನೆ. ಭಾರತೀಯ ಸ್ತ್ರೀವಾದ ಆ ಮೂಲಕ ಆಧುನಿಕ ಸ್ತ್ರೀವಾದವನ್ನು ನಾವು ಕಟ್ಟಿಕೊಳ್ಳಬೇಕು.

*೧೦. ಸಾಹಿತ್ಯದಲ್ಲಿ ಮಹಿಳೆಯರ ಸ್ಥಾನಮಾನ.*

ಸಮಾಜದಲ್ಲಿ ಹೇಗೋ ಸಾಹಿತ್ಯದಲ್ಲಿಯೂ ಹಾಗೆ ನೋಡ್ತಾರೆ. ಹೆಣ್ಣನ್ನು 'ದ್ವಿತೀಯದರ್ಜೆ' ಎಂದು ಕರೆಯುತ್ತಾರಲ್ಲ ಹಾಗೆ. ಸಾಹಿತ್ಯದಲ್ಲಿಯೂ ದ್ವಿತೀಯ ದರ್ಜೆಯಲ್ಲಿಯೇ ನೋಡ್ತಾರೆ. ಅದನ್ನು ಪ್ರತಿಭಟಿಸಿ ಮೊದಲ ತಲೆಮಾರಿನವರು ತಮ್ಮದೇ ಆದ ಲೇಖಕಿಯರ ಸಂಘ ಮಾಡಿಕೊಳ್ಳುವ ಮೂಲಕ ಮಹಿಳೆಯರ ಸಾಹಿತ್ಯ ಕುರಿತಾಗಿ ಭಿನ್ನವಾದಂತಹ ಒಂದು ಸಣ್ಣ ನಡಿಗೆ ಪ್ರಾರಂಭವಾಯಿತು. ಆದರೂ ಬ್ರಾಹ್ಮಣ ಮಹಿಳೆಯರ ಮೂಲಕ ಪ್ರಾರಂಭವಾದ ಕಾರಣಕ್ಕಾಗಿ ಇಲ್ಲಿಯೂ ಶೂದ್ರ, ದಲಿತ, ಎನ್ನುವಂತಹದ್ದು ಅಂಚಿಗೆ ಸರಿಯಿತು. ಇದು ಜೀವಂತವಾಗಿರುವುದರಿಂದ ಬ್ರಾಹ್ಮಣ ಮಹಿಳೆಯರ ಸಾಹಿತ್ಯವೊಂದೇ ಅಖಂಡ ಕರ್ನಾಟಕದ ಮಹಿಳಾ ಸಾಹಿತ್ಯ ಎಂದು ತಿಳಿದುಕೊಂಡು ಅದೊಂದೇ ವಿಮರ್ಶೆಯನ್ನು ಮಾಡಲು ತೊಡಗಿದರು. ಆದರೆ ಈಗ ದಲಿತರ – ಹಿಂದುಳಿದವರಿದರ ಬದುಕಿನ ಕ್ರಮಗಳಾವುವು. ಅವುಗಳನ್ನು ಕುರಿತು ಸಾಹಿತ್ಯದ ಮೂಲಕ ಮಾತಾಡಬೇಕಾಗಿದೆ.

*೧೧. ಕನ್ನಡ ಸಾಹಿತ್ಯ ಪರಂಪರೆ ನಿಮ್ಮ ದೃಷ್ಟಿಯಲ್ಲಿ?*

ನಮ್ಮ ಸಾಹಿತ್ಯ ಪರಂಪರೆ ಬಹಳ ದೊಡ್ಡದು. ಸಮೃದ್ಧವಾದಂತಹ ಪರಂಪರೆ. ಆದರೆ ಇಡೀ ಪರಂಪರೆಗೂ, ಚರಿತ್ರೆಗೂ ಬಹಳ ವ್ಯತ್ಯಾಸ ಇದೆ. ದಾಖಲಿಸಲಾರದಂತಹದ್ದೇ ಬಹಳಷ್ಟಿದೆ. ದಾಖಲುಗೊಂಡದ್ದನ್ನು ವಿಶ್ಲೇಷಣೆ ಮಾಡುವ, ವಿಮರ್ಶೆ ಮಾಡುವ, ಓದುವ,

ಮರುಓದಿಗೆ ಒಳಪಡಿಸುವ, ಕೆಲಸ ಆಗಬೇಕಿದೆ. ಆಯಾ ಕಾಲದ ಅಗತ್ಯಕ್ಕನುಗುಣವಾಗಿ ನಾವಂತೂ ಅದನ್ನು ಮಾಡುತ್ತಲೇ ಬಂದಿದೀವಿ.

*೧೨. ಪ್ರಸ್ತುತ ಕನ್ನಡ ಭಾಷೆ, ಸಾಹಿತ್ಯ ಸ್ಥಾನಮಾನ.*

ಶಾಸ್ತ್ರೀಯ ಸ್ಥಾನಮಾನ ಸಿಕ್ಕಮೇಲೆ ಕನ್ನಡದೊಳಗೆ ಬಹಳ ಅರ್ಥಪೂರ್ಣವಾದಂತಹ ಕೆಲಸ ಪ್ರಾರಂಭ ಆಗಿದೆ. ಸಂಶೋಧನೆ ಮೂಲಕ ಪ್ರಾಚೀನ ಭಾಷೆ ಕುರಿತಾಗಿ ಹೊಸ ತಲೆಮಾರಿಗೆ ಪರಿಚಯಿಸುವ ಕೆಲಸ ಆಗ್ತಾ ಇದೆ. ಇದೆಲ್ಲ ಕನ್ನಡದ ದೃಷ್ಟಿಯಿಂದ ಆಶಾದಾಯಕ ಬೆಳವಣಿಗೆ ಆಗಿದೆ.

*೧೩. ಗ್ರಾಮೀಣ ಬದುಕಿನ ಬಗ್ಗೆ ನಿಮ್ಮ ಅಭಿಪ್ರಾಯ ಏನು?*

ಗ್ರಾಮೀಣ ಬದುಕು ಇವತ್ತಿಗೂ ನನ್ನ ವಯೋಮಾನದ ಸಂದರ್ಭದಲ್ಲಿ ಏನಿತ್ತು, ಆವಾಗ ಇದ್ದಂತಹದ್ದೇ ಇವಾಗಲೂ ಇದೆ. ಆಧುನಿಕತೆ ಎಂಬುದು ಹಳ್ಳಿಗಳಿಗೂ ಪ್ರವೇಶ ಮಾಡಿದೆ. ಆದರೆ ಆಧುನಿಕತೆ ಎಂಬುದು ಅರಿವಾಗಿ ಪ್ರವೇಶ ಮಾಡಿಲ್ಲ, ಆಕರ್ಷಣೆಯಾಗಿ ಪ್ರವೇಶ ಮಾಡಿದೆ. ಅರಿವಾಗಿ ಪ್ರವೇಶ ಮಾಡಿತ್ತು ಅಂದ್ರೆ ಹಳ್ಳಿಗಳಲ್ಲಿ ಗುಣಾತ್ಮಕವಾದ ಬದಲಾವಣೆಗಳು ಆಗುತ್ತಿತ್ತು. ಆದರೆ ಆಕರ್ಷಣೆಯಾಗಿ ಪ್ರವೇಶ ಮಾಡಿರೋದ್ರಿಂದ ಅದ್ವಾನಗಳು ಹೆಚ್ಚಾಗಿವೆ. ಯುವಕರಿಗೆ ಬದುಕಿನ ಗೊತ್ತು ಗುರಿಗಳನ್ನು ಕಂಡುಕೊಳ್ಳೋದಕ್ಕೆ ಸಾಧ್ಯವಾಗುತ್ತಿಲ್ಲ. ಯಾವಾಗಲೂ ಗಾಮಭಾರತ ಸದೃಢವಾಗಿತ್ತು ಎಂದರೆ ಭಾರತದ ಭವಿಷ್ಯ ಅದರ ಮೇಲೆ ನಿರ್ಧಾರವಾಗುತ್ತದೆ. ಗ್ರಾಮಗಳು ಅರಿವಿನ ನೆಲೆಯೊಳಗೆ ಬದಲಾಗುತ್ತಿಲ್ಲ. ಆಕರ್ಷಣೆ ನೆಲೆಯೊಳಗೆ ಬದಲಾಗುತ್ತಿವೆ. ಇದು ದುರಂತ.

*೧೪. ಕೌಟುಂಬಿಕ ಬದುಕಿನ ಬಗ್ಗೆ ನಿಮ್ಮ ಅಭಿಪ್ರಾಯವೇನು?*

ನನಗೆ ಕುಟುಂಬ ಕಂಡರೆ ಬಹಳ ಇಷ್ಟ. ಕುಟುಂದೊಳಗೆ ನಾನು ಎಲ್ಲರು ಇರಬೇಕೆಂದು ಬಯಸುತ್ತೇನೆ. ಏಕೆಂದರೆ ನಾನು ಕೂಡು ಕುಟುಂಬದಿಂದ ಬೆಳೆದವಳು. ನನಗೆ ನಮ್ಮ ತಂದೆಯ ಕಡೆಯ ಕುಟುಂಬದವರು ನಮ್ಮ ತಾಯಿಯ ಕುಟುಂಬದವರು ಅವರೆಲ್ಲರ ಜೊತೆ ನನಗೆ ಇವತ್ತಿಗೂ ಸಂಬಂಧಗಳು ಚೆನ್ನಾಗಿ ಇದೆ. ಕುಟುಂಬವನ್ನು ಬಿಟ್ಟು ನನಗೆ ಹೊರಗೆ ಬದುಕಲಿಕ್ಕೆ ಆಗುವುದಿಲ್ಲ. ಕುಟುಂಬದಿಂದ ನನಗೆ ಎಷ್ಟೇ ನೋವಾಗಿದ್ದರೂ ಅಂತಿಮವಾಗಿ ಕುಟುಂಬವೆ ನನಗೆ ಪ್ರೀತಿ.

*೧೫. ಪರ್ಯಾಯ ಸಮಾಜ ನಿರ್ಮಾಣದ ನಿಮ್ಮ ಕನಸೇನು?*

ಸಮಾಜವಾದಿನೆಲೆಯೊಳಗೆ ಸಮಾಜ, ವರ್ಗಾತೀತ ನೆಲೆಯೊಳಗೆ ಸಮಾಜ, ಜಾತ್ಯತೀತವಾದಂತಹ ಸಮಾಜ ಇರಬೇಕು. 'ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು' ಎನ್ನುವ ಕುವೆಂಪು ಆಶಯದಾಗೆ ಆಗಬೇಕು ಎನ್ನುವಂತಹದ್ದು ನನ್ನ ಆಶಯ.

*೧೬. ಸಾಂಸ್ಕೃತಿಕ ರಾಜಕಾರಣದ ಬಗ್ಗೆ ನಿಮ್ಮ ನಿಲುವೇನು?*

ಸಾಂಸ್ಕೃತಿಕ ರಾಜಕಾರಣ ಸಮಾಜದೊಳಗೆ ಏನಿದೆ ಅದು ಸಾಹಿತ್ಯ ಲೋಕದಲ್ಲೂ ಕೆಲಸ ಮಾಡುತ್ತದೆ. ಬಹು ಸಂಸ್ಕೃತಿಗಳ ನಾಡು ಇದು. ಆದರೆ ನಾವು ಏಕ ಸಂಸ್ಕೃತಿಯನ್ನೇ ಒಪ್ಪಿಕೊಂಡು ಅದನ್ನೇ ಪ್ರತಿಷ್ಠಾಪಿಸಲು ಹಂಬಲಿಸುತ್ತೇವೆ. ಸಾಹಿತ್ಯಲೋಕದೊಳಗೆ ಜಾತಿ ಇದೆ. ವರ್ಗ ಇದೆ. ಲಿಂಗ ಇದೆ. ಹೀಗಾಗಿ ಯಾವುದು ಸಾಂಸ್ಕೃತಿಕ ರಾಜಕಾರಣ ಎನ್ನುವಂತಹದ್ದೋ ಅದು ಇವುಗಳನ್ನೆಲ್ಲ ಮೀರಿರಬೇಕಾಗಿತ್ತು. ಆದರೆ ಮೀರಿಲ್ಲ.

*೧೭. ವಿಶ್ವವಿದ್ಯಾನಿಲಯದಲ್ಲಿ ನೀವು ಪ್ರಾಧ್ಯಾಪಕರಾಗಿದ್ದಾಗ ಆದ ಅನುಭವಗಳೇನು?*

ಸಮಾಜದಲ್ಲಿ ಏನಿದೆಯೋ ಅದು ವಿಶ್ವವಿದ್ಯಾನಿಲಯದಲ್ಲಿಯೂ ಇರುತ್ತದೆ. ವಿಶ್ವವಿದ್ಯಾನಿಲಯ ಸಮಾಜ ಬಿಟ್ಟು ಹೊರಗಿಲ್ಲ. ಇದೇ ಹೊರಗಿನ ಸಮಾಜದವರು ವಿ.ವಿ.ಗಳಲ್ಲೂ ಇರ್ತಾರಾ? ಅದೇ ಮನೋಭಾವದ ಗಂಡಸರೂ ಇರ್ತಾರ? ಅದೇ ಮನೋಭಾವದ ಅಧಿಕಾರಿಗಳಿರ್ತಾರ? ಸಮಾಜದ Product ನಾವು ಆಗಿರೋದ್ರಿಂದ ಅಲ್ಲಿಯ ದೌರ್ಬಲ್ಯಗಳು ಇಲ್ಲಿಯೂ ಇರ್ತಾವೆ.

*೧೮. ವಿಶ್ವವಿದ್ಯಾನಿಲಯದ ಉನ್ನತ ಹುದ್ದೆಯನ್ನು ಅಲಂಕರಿಸಿರುವ ನೀವು ನಿಮ್ಮ ಆಡಳಿತದ ಅನುಭವಗಳೇನು?*

ಅವಕಾಶ ಸಿಕ್ಕರೆ ಪರಿಸರಕ್ಕೆ, ಸಮಾಜಕ್ಕೆ ಏನಾದರೂ ಒಳ್ಳೆಯದು ಮಾಡಬೇಕು. ಅಂಬೇಡ್ಕರ್ ಹೇಳಿದ ಮಾತು ಸುಳ್ಳಲ್ಲ. ಹಿಂದುಳಿದವರು ಅಧಿಕಾರ ಹಿಡಿಯಬೇಕು. ಅಧಿಕಾರದ ಶಿಸ್ತು ಬಹಳ ದೊಡ್ಡದಿದೆ. ನಾವು ಹೊರಗಡೆ ಅಧ್ಯಾಪಕಿಯಾಗಿ ಸಾಹಿತಿಯಾಗಿ ಆಡುವಂತಹ ಮಾತುಗಳಿದ್ದವಲ್ಲ. ಅವುಗಳನ್ನು ಅನುಷ್ಠಾನಕ್ಕೆ ತರಲು ಒಂದು ಅಧಿಕಾರಬೇಕು. ಸಮಸ್ಯೆಗಳನ್ನು ನೇರವಾಗಿ ಬಗೆಹರಿಸಲು ಸಾಧ್ಯವಾಗುತ್ತದೆ.

*೧೯. ನಿಮ್ಮ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿರುವುದು ಸ್ತ್ರೀವಾದವೋ? ಸ್ತ್ರೀಸಂವೇದನೆಯೋ? ಅಥವಾ ಸಾರ್ವತ್ರಿಕ ಮೌಲ್ಯಗಳೋ?*

ನನ್ನದು ಸಾರ್ವತ್ರಿಕ ಮೌಲ್ಯಗಳು. ಒಂದು ಜಾತಿ, ವರ್ಗದ ಹಿತವನ್ನು ಇಟ್ಟುಕೊಂಡು ಮಾತನಾಡುವ ಸಾಹಿತ್ಯ ನನ್ನದಲ್ಲ. ನನ್ನದು ನನ್ನ ಹಾಗೆ ಇರುವಂತಹ ಸಮುದಾಯಗಳ ಧ್ವನಿ. ನಾನು ಅಲಕ್ಷ್ಯತೆಗೆ ಒಳಗಾದ ಬಹುಸಮುದಾಯಗಳ ಧ್ವನಿಯಾಗಿ ನಾನು ಮಾತನಾಡುತ್ತೇನೆ. ಸಮಾನತೆ ಎಲ್ಲರಿಗೂ ಆಗಬೇಕು. ಇದು ನನ್ನ ಸಾಹಿತ್ಯ ಸಿದ್ಧಾಂತ.

*೨೦. ಇಂದು ಬಂಡಾಯ ಸಾಹಿತ್ಯ ಚಳವಳಿ ಇದೆಯೇ?*

ಯಾವುದೇ ಒಂದು ಚಳವಳಿಯನ್ನು ಕಾಲ ನಿರ್ಧಾರ ಮಾಡುತ್ತದೆ. ಇವತ್ತಿನ ಸಾಮಾಜಿಕವಾದಂತಹ ರಾಜಕೀಯವಾದಂತಹ ಸ್ವರೂಪ ಬೇರೆಯದೇ ಇದೆ. ಇವತ್ತಿನ ಅಗತ್ಯಕ್ಕೆ ಅನುಗುಣವಾಗಿ ಹೊಸ ಶರೀರವನ್ನು ಪಡೆದುಕೊಳ್ಳಬೇಕಾಗುತ್ತದೆ. ಹಳೆಯ ಮಾದರಿಯ ಹೋರಾಟಗಳನ್ನು ಇವತ್ತು ರೂಪಿಸುವುದಲ್ಲ. ಇವತ್ತಿನ ರಾಜಕೀಯ, ಸಾಮಾಜಿಕ ಮತ್ತು ಬಹುರಾಷ್ಟ್ರೀಯ ಕಂಪನಿಗಳು ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಚಳವಳಿಗಳ ಸ್ವರೂಪ ಬದಲಾಗುತ್ತಿದೆ. ಅದನ್ನು ನಾವು ಸರಿಯಾಗಿ ನೋಡಿಕೊಳ್ಳಬೇಕು. ಹಾಗಾಗಿ ಚಳವಳಿ ಯಾವ ಕಾಲಕ್ಕೂ ಸಾಯುವುದಿಲ್ಲ. ಎಲ್ಲ ಕಾಲಕ್ಕೂ ಈ ಚಳವಳಿ ಅನ್ನೋದು ಇದ್ದೇ ಇರುತ್ತದೆ.

*೨೧. ಕೋಮುವಾದದ ಬಗ್ಗೆ ನಿಮ್ಮ ನಿಲುವೇನು?*

ಇದು ರಾಜಕೀಯ ಪ್ರೇರಿತವಾದಂತಹ ವಿದ್ಯಮಾನ. ಜಾತಿವಾದ ಇದೆ. ಕೋಮುವಾದ ನಮ್ಮ ಪರಂಪರೆಯಲ್ಲಿ ಇರಲಿಲ್ಲ. ಸೌಹಾರ್ದತೆ ಧರ್ಮಸಹಿಷ್ಣುತೆ ಎನ್ನುವಂತಹದ್ದು ಇತ್ತು. ಅದು ಈ ನೆಲದ ಬಹುದೊಡ್ಡ ಶಕ್ತಿ. ಆದರೆ ಇತ್ತೀಚಿನ ದಿನಗಳಲ್ಲಿ ರಾಜಕೀಯಕ್ಕೆ ಸಂಬಂಧಪಟ್ಟಂತೆ ಕೋಮುವಾದಗಳನ್ನು ಸೃಷ್ಟಿಸುತ್ತಾ ಇಲ್ಲಿನ ಎಲ್ಲದಕ್ಕೂ ಬಳಸಿಕೊಳ್ಳುತ್ತಾ ಇದೆ.

*೨೨. ಭಾಷಾಮಾಧ್ಯಮ ಕುರಿತು ನಿಮ್ಮ ಅಭಿಪ್ರಾಯವೇನು?*

ವೈಜ್ಞಾನಿಕವಾಗಿ ಬಹಳಷ್ಟು ಶಿಕ್ಷಣತಜ್ಞರು ಹೇಳುವ ಹಾಗೆ ಮನೆಯ ಭಾಷೆಯಲ್ಲಿ, ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಸಿಗಬೇಕು. ಆಮೇಲೆ ಜಗತ್ತು ಏನು ಬಯಸುತ್ತಿದೆ. ಜಗತ್ತಿನ ಭಾಷೆ ಅನ್ನುವಂತದ್ದು ಅದು ಎಲ್ಲರಿಗೂ ದಕ್ಕಬೇಕು. ಆದರೆ ಜಗತ್ತಿನ ಜ್ಞಾನವನ್ನು ಗ್ರಹಿಸಿಕೊಳ್ಳಲಿಕ್ಕೆ ಮಾತೃಭಾಷೆಯಷ್ಟು ಸಶಕ್ತವಾದಂತಹ ಇನ್ನೊಂದು ಮಾಧ್ಯಮವಿಲ್ಲ ಎಂದು ಬಹಳಷ್ಟು ತಜ್ಞರು ಹೇಳ್ತಾರೆ. ಹೀಗಾಗಿ ನೀವು ಮೊದಲು ಮಾತೃಭಾಷೆಯೊಳಗೆ ನಿಮ್ಮ ಎಲ್ಲ ವಿಜ್ಞಾನ ಕಲಿಸಿ, ತಂತ್ರಜ್ಞಾನ ಕಲಿಸಿ. ಆಮೇಲೆ ಎಲ್ಲರೂ ಇಂಗ್ಲಿಷನ್ನು ಭಾಷೆಯಾಗಿ ಕಲಿಯಲಿ.

*೨೩. ನಿಮ್ಮ ಹವ್ಯಾಸಗಳೇನು?*

ಓದು, ಬರಹ, ಎಲ್ಲರಿಗೂ ಇವರು ಹಾಗೆಯೇ ನನ್ನ ಹವ್ಯಾಸಗಳು ಸಂಗೀತ ಕೇಳುತ್ತೇನೆ. ನಾಟಕ ನೋಡುತ್ತೇನೆ. ರಂಗಭೂಮಿ ಬಗ್ಗೆ ಆಸಕ್ತಿ ಇದೆ. ಅದರಲ್ಲೂ ವೃತ್ತಿ ರಂಗಭೂಮಿ ಬಗ್ಗೆ. ಸಾಮಾನ್ಯ ಮನುಷ್ಯನಿಗೆ ಏನೇನೂ ಹವ್ಯಾಸಗಳಿರುತ್ತವೋ ಅದೆಲ್ಲವೂ ಇದೆ. ಅಧಿಕಾರದ ಕಾರಣಕ್ಕಾಗಿ ನಾನು ನನ್ನ ಸಂತೋಷ ಕಳೆದುಕೊಂಡಿಲ್ಲ.

*೨೪. ನಿಮ್ಮ ಆಸಕ್ತಿಯ ಕ್ಷೇತ್ರ ಯಾವುದು?*

ನನಗೆ ಸಾಹಿತ್ಯದ ಬಗ್ಗೆ ಹೆಚ್ಚು ಆಸಕ್ತಿ. ಹಾಗೆಯೇ ನನಗೆ ರಾಜಕೀಯದ ಬಗ್ಗೆ ಒಲವಿದೆ. ಹಾಗಂತ ನಾನು ರಾಜಕಾರಣಿಯಲ್ಲ. ರಾಜಕೀಯದ ಬಗ್ಗೆ ಒಲವಿದೆ. ಪ್ರಜ್ಞೆಯಿದೆ. ಆಮೇಲೆ ನಾನು ವೃತ್ತಿ ರಾಜಕಾರಣಿಯಾಗಲು ಇಷ್ಟಪಡುವುದಿಲ್ಲ.

*೨೫. ನಿಮ್ಮ ಮುಂದಿನ ಬದುಕಿನ ಬಗ್ಗೆ ತಿಳಿಸಿ?*

ಕಾಲ ಕೈಹಿಡಿದು ನಡೆಸುವವರೆಗೂ ನಡೆಯುವುದಷ್ಟೇ. ಹೀಗೆ ಹೀಗೆ ಅಂತ ಏನೂ ಇಲ್ಲ. ನಾನು ಯಾವುದನ್ನೂ ಲೆಕ್ಕ ಹಾಕಿಕೊಂಡು ಹೋಗುವುದಿಲ್ಲ. ಅದು ನನ್ನಂತಹವಳಿಗೆ ಆಗುವುದಿಲ್ಲ.

* * * * *

